

ಬನ್ನಿರೈ ಸಂಸಾರ ಶರಧಿಯನು ದಾಂಟುವರು /
ಬನ್ನಿರೈ ಮೋಕ್ಷಗಾಮಿಗಳು.

**ಮೇಳ ಕಟ್ಟುದು ಕಟ್ಟುದೆ.**

---

1956ರಲ್ಲಿ ಬಿ.ಜಿ.ಮುಡೂರು ಅವರಿಂದ ಅರೆಬಾಷೆ ಪ್ರಹಸನ

# ಬೆಳ್ಪಾಕನ ಮುಗ್ತಿ

**BOLPAKANA MUGTH :**
Arebhase social Drama - Written by Vidwan T.G.Mudoor Panja - Published by Karnataka Arebhase Samskrthi mathu Shahithya Academy. Tel: 08272 - 223055

First Edition : 2015
Copies : 500
Price : Rs. 50

**ಪುಟಗಳು : 55**


**ಸಲಹಾ ಸಮಿತಿ :**
ಶ್ರೀ ಕೊಲ್ಯದ ಗಿರೀಶ್
ಡಾ. ಪೂವಪ್ಪ ಕಣಿಯೂರು
ಡಾ. ಕೋರನ ಸರಸ್ವತಿ ಪ್ರಕಾಶ್
ಶ್ರೀ ಮೋಹನ ಸೋನ
ಶ್ರೀಮತಿ ಸಂಗೀತ ರವಿರಾಜ್

**ರಚನೆ :** ವಿದ್ವಾನ್ ಟಿ.ಜಿ. ಮುಡೂರು ಪಂಜ
**ಪ್ರಕಟಣೆ :** ರಿಜಿಸ್ಟ್ರಾರ್ ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಮುಖಪುಟ ವಿನ್ಯಾಸ :** ಶ್ರೀ ಮೋಹನ ಸೋನ
ಕಂಪ್ಯೂಟರ್ ವಿನ್ಯಾಸ : **ನಯನ ಸೋನ**

**ಪುಸ್ತಕ ದೊರೆಯುವ ಸ್ಥಳ:** ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಕಾಫಿ ಕೃಪಾ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ ಮಡಿಕೇರಿ ದೂ: 08272 223055

**ಮುದ್ರಣ:** ಶ್ರೀ ಕೃಷ್ಣ ಕಂಪ್ಯೂಟರ್ & ಪ್ರಿಂಟರ್ಸ್ ಮಡಿಕೇರಿ ದೂ: 08272 224919

# ಅಧ್ಯಕ್ಷರ ಮಾತ್

ಅರೆಬಾಸೆಲಿ ಕಥೆ, ಕವನ, ನಾಟಕ ಬರೆಯುವ ಲೇಖಕರ್ನ ಕಂಡ್ರೆ ಖುಷಿ ಆದೆ. ಸರಕಾರ ರಚನೆ ಮಾಡ್ದ ಅರೆಭಾಷೆ ಅಕಾಡೆಮಿಗೆ ಕೂಡ ಸಾರ್ಥಕತೆ ಇದ್ದದೆ. ಶುರುಗೆ 4 ಪುಸ್ತಕನ ಪ್ರಕಟನೆ ಮಾಡ್ದ ಗೌರವ ಅಕಾಡೆಮಿಗೆ ಸಲ್ಲಿದೆ, ಮತ್ತೆ 6 ಪುಸ್ತಕನ ಪ್ರಕಟಣೆ ಮಾಡ್ತಾವೊಳೊ.

ಪುಸ್ತಕ ಬರ್ದ ಎಲ್ಲಾ ಲೇಖಕರಿಗೂ ನನ್ನ ಹೃತ್ಪೂರ್ವಕ ಅಭಿನಂದನೆನ ತಿಳಿಸ್ತಾವೊಳೆ. ಬರ್ದ ಎಲ್ಲಾ ಪುಸ್ತಕ ಶ್ರೇಷ್ಠ ಅಂತ ನಾನ್ ಹೇಳ್ದುಲೆ. ಲೇಖಕರ್ ಅವರ ಸೃಜನ ಶೀಲತೆನ ಈ ಲೇಖನಲಿ ತೋರ್ಸೊಳೊ. ಹಂಗೆ ಎಲ್ಲಾ ಪ್ರಕಾರಗಳ್ಲಿ ಅವರ ಸಾಮರ್ಥ್ಯನ ಓರೆಗೆ ಹಚ್ಚಿಯೊಳೊ.

ಈ ನಿಟ್ಟ್‌ಲಿ ವಿದ್ವಾನ್ ಟಿ.ಜಿ. ಮುಡೂರುನವು ಬರ್ದ ಬೊಳ್ಪಾಕನ ಮುಗ್ತ್ ಅರೆಭಾಷೆ ಸಾಮಾಜಿಕ ಪ್ರಹಸನ ದಕ್ಷಿಣ ಕನ್ನಡ ಗ್ರಾಮೀಣ ಅರೆಬಾಸಿಕರ ಸಾಂಸ್ಕೃತಿಕ ಜೀವನದ ಒಂದು ನೋಟಂತ್ತೇಳ್ದು ನನ್ನ ಅನಿಸಿಕೆ

ಅಕಾಡೆಮಿನ ಕರೆಗೆ ಓಗೊಟ್ಟ್ 1956 ರಲ್ಲಿ ಬರ್ದ ಕೃತಿನ ಪ್ರಕಟಣೆಗೆ ಕೊಟ್ಟ ಲೇಖಕ ವಿದ್ವಾನ್ ಟಿ.ಜಿ. ಮುಡೂರುನವ್ಕ ಹಂಗೆ ಮುಖಪುಟ ವಿನ್ಯಾಸ ಮಾಡ್ದ ಮೋಹನ್ ಸೋನಾ, ಮುದ್ರಣ ಕಾರ್ಯಕ್ಕೆ ಸಹಾಯ ಮಾಡ್ದ ಡಾ. ಪೂವಪ್ಪ ಕಣಿಯೂರವ್ಕ, ಪುಸ್ತಕ ಸಮಿತಿಯವ್ಕ ಅಕಾಡೆಮಿ ಸದಸ್ಯರಿಗೂ ನನ್ನ ಪ್ರೀತಿಯ ಕೃತಜ್ಞತೆನ ಸಲ್ಲಿಸ್ತಾವೊಳೆ.

**ಕೊಲ್ಯದ ಗಿರೀಶ್**
ಅಧ್ಯಕ್ಷರ್

# ಬೊಳ್ಪಾಕನ ಮುಗ್ತ್

## ಪ್ರಹಸನದ ಕುರಿತು

ಕಳೆದ 1956ರಲ್ಲಿ ನಾನು ಬರೆದಿರುವ ಪ್ರಹಸನವಿದು. ನನ್ನ ಬರೆಹಗಳಲ್ಲಿ ನಾಟಕ ರೂಪಕ ಪ್ರಹಸನಗಳೇ ಅಧಿಕ. ಶಾಲಾ ಕಾಲೇಜುಗಳ ಕಲಾ ಸಂಘಗಳ ಉತ್ಸವಗಳಲ್ಲಿ ರಂಗಪ್ರದರ್ಶನಗಳಿಗಾಗಿ ಬರುವ ಒತ್ತಡಗಳೂ ಇದಕ್ಕೆ ಕಾರಣವಿರಬಹುದು. ಚಿಂತನೆಗಳಿಗೆ ಹಚ್ಚುವ ಬಿಗು ನಾಟಕಗಳೊಂದಿಗೆ ಹಾಸ್ಯದ ಲಘು ನಾಟಕಗಳಿಗೂ ಪ್ರತ್ಯೇಕ ಬೇಡಿಕೆಗಳಿರುತ್ತವೆ. ಒಂದು ಪ್ರದೇಶದ ಆಡುನುಡಿಗಳಲ್ಲಿ ರಂಗಕೃತಿಗಳು ಮೈದಳೆದುಕೊಂಡಾಗ ಅವು ಹೆಚ್ಚು ಪುಷ್ಟಿಗೊಂಡು ಜನತೆಗೆ ಹೆಚ್ಚು ಹತ್ತಿರವಾಗುತ್ತವೆ. ಸಾಮಾಜಿಕ ನಾಟಕಗಳಂತೂ ಜನರಾಡುವ ನುಡಿಗಳಲ್ಲಿ ಬಂದಾಗ ಹೆಚ್ಚು ಜೀವಂತಗೊಳ್ಳುತ್ತವೆ.

ತುಳುನಾಡೆಂದೇ ಹೆಸರಿಸಬಹುದಾದ ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ಪ್ರಚಲಿತವಿರುವ ಇಲ್ಲಿನ ಅಧಿಕ ಸಂಖ್ಯೆಯಲ್ಲಿ

ರುವ ಗೌಡ ಮತ್ತು ಹವ್ಯಕ ಜನಾಂಗದವರಾಡುವ ಕನ್ನಡಗಳು ಬರೆಹಗಳಲ್ಲಿ ಕಾಣಿಸಿಕೊಳ್ಳುವ ಗ್ರಾಂಥಿಕ ಕನ್ನಡಕ್ಕಿಂತ ಭಿನ್ನವಾದುವು. ಸಂಕ್ಷಿಪ್ತಗೊಂಡಿರುವ ಈ ಅರೆಗನ್ನಡಗಳು ಹಳೆಗನ್ನಡದ ಗ್ರಾಮ್ಯರೂಪದ ಆಡುನುಡಿಗಳು.

ತುಳು ಮತ್ತು ಹವ್ಯಕ, ಅರೆಬಾಷೆಯಲ್ಲಿ ನಾನು ಕೆಲವು ನಾಟಕಗಳನ್ನು ಬರೆದಿರುವೆನಾದರೂ ಅವು ಪ್ರಕಟಗೊಂಡಿರುವುದಿಲ್ಲ. ಅವುಗಳ ಹಸ್ತಪ್ರತಿಗಳೂ ನನ್ನಲ್ಲಿ ಈಗ ಉಳಿದಿಲ್ಲ. ಹಿಂದೆ ಹಲವೆಡೆ ಪ್ರದರ್ಶನಗೊಂಡ ತೃಪ್ತಿ ಮಾತ್ರ ಉಳಿದಿದೆ. ಇತ್ತೀಚೆಗೆ ಹೊರತಂದ ನನ್ನ ಅಭಿನಂದನ ಗ್ರಂಥ 'ನಂದಾದೀಪ'ದ 'ಗರುಡ' ಸಂಪುಟದಲ್ಲಿ ನನ್ನ ಹೆಚ್ಚಿನ ಗದ್ಯಪದ್ಯ ನಾಟಕ ಕಾವ್ಯಗಳು ಒಳಗೊಂಡಿವೆಯಾದರೂ ಹವ್ಯಕ, ಅರೆಬಾಷೆಯ ಕೃತಿಗಳು ಸೇರ್ಪಡೆಗೊಂಡಿಲ್ಲ.

1955ರಲ್ಲಿ ನಾನು ಬರೆದಿರುವ 'ಒಪ್ಪಕುಂಞಿ' ಹವಿಗನ್ನಡ ಪ್ರಹಸನವನ್ನು 2006ರಲ್ಲಿ ಮತ್ತೊಮ್ಮೆ ಬೆಂಗಳೂರಿನ ಬನಶಂಕರಿ ರಾಘವ ರಂಗದವರು ಅಲ್ಲಿ ಪ್ರದರ್ಶಿಸುವ ಮೂಲಕ ಅದು ಬೆಳಕಿಗೆ ಬರಲು ಕಾರಣರಾದರು. ಅದರೊಂದಿಗೆ ಇದೀಗ ಗೆದ್ದಲು ಪಾಲಾಗಿದ್ದ ಅರೆಬಾಷೆಯ 'ಬೊಳ್ಪಾಕನ ಮುಗ್ತ್' ಪ್ರಹಸನದ ಹಸ್ತಪ್ರತಿಯು ಅನಿರೀಕ್ಷಿತವಾಗಿ ದೊರಕಿದ್ದು ಇದು ಕೂಡಾ ಬೆಳಕಿಗೆ ಬರುತ್ತಿದೆ.

ಕಳೆದ 1956ರಲ್ಲಿ ರಚನೆಗೊಂಡಿರುವ ಬೊಳ್ಪಾಕನ ಮುಗ್ತ್ ನಗೆ ನಾಟಕ ಓದುವುದಕ್ಕಿಂತಲೂ ಹೆಚ್ಚಾಗಿ ಆಡುವ ರಂಗಕೃತಿ. ಇದರಲ್ಲಿ ಸಾಮಾಜಿಕ ಸಮುದಾಯದ ಸಜೀವ ಚಿತ್ರಣವಿದೆ. ಗ್ರಾಮೀಣ ಆಡುಮಾತಿನ ಸೊಗಡಿದೆ. ಇಲ್ಲಿ ಆಟ ಕೂಟ ಬೇಟೆ ಕಂಬಳ ಅಂಕ ಆಯನಗಳಿವೆ. ಗರತಿ ಗಯ್ಯಾಳಿಗಳ ಹೊಂಚು ಮಿಂಚುಗಳಿವೆ. ಭೂತ ಪ್ರೇತಗಳ ಕಟ್ಟೆ ಪುರಾಣಗಳಿವೆ. ಯಕ್ಷಗಾನ ಮೇಳದ ಗೀಳು ಗೋಳುಗಳಿವೆ. ತಮ್ಮ ನಡೆನುಡಿಗಳೆಡೆ ಎತ್ತಿ ಆಡುವ ಯಕ್ಷಗಾನ ಗುಂಗಿನ ಖಯಾಲಿಗಳ ಗತ್ತಿನ ಪದಗಳಿವೆ. ಮದುವೆಮನೆಯ ಗದ್ದಲ ಗಡಿಬಿಡಿಯಲ್ಲಿ ತಾಳಮದ್ದಳೆಯ ಜಾಗರಣೆ ಮುಗಿದು ಬೆಳಗಾದಾಗ ಇಲ್ಲಿ ಎಲ್ಲವೂ ಅಯೋಮಯಗೊಳ್ಳುತ್ತದೆ.

ಅಂದು ಇದರಲ್ಲಿ ಬಳಸಿರುವ ಕೆಲ ಅರೆಬಾಷಿಕ ನುಡಿಗಳ ರೂಪವನ್ನು ಲಿಪಿ ಸಂಯೋಜನೆಯ ಹೊತ್ತು ಪರಿಷ್ಕರಿಸಿರುವ ಲೇಖಕ, ಚಿಂತಕ, ಕಲಾವಿದ, ಸಂಘಟಕ ದಿ. ವೆಂಕಟ್ ಮೋಂಟಡ್ಕ – ಇಂದು ಆಕರ್ಷಕ ಮುಖಪುಟ ವಿನ್ಯಾಸದಿಂದ ಕೃತಿಗೆ ಮೆರಗು ತಂದಿರುವ ಖ್ಯಾತ ಚಿತ್ರಕಲಾವಿದ ಲೇಖಕ, ರಂಗತಜ್ಞ ವೋಃಪನ ಸೋನ–

ಚರ್ಚೆ ಸಂವಾದಗಳಿಂದ ಬರೆಹಗಳಿಗೆ ಒತ್ತು ನೀಡುವ ಸಾಹಿತಿ ಜಾನಪದ ಸಂಶೋಧಕ ಡಾ. ಪೂವಪ್ಪ ಕಣಿಯೂರು ಇವರೆಲ್ಲರ ಆತ್ಮೀಯತೆಗೆ ಮಣಿದು ಈ ಹಿಂದೆ ಇದನ್ನು ರಂಗಕ್ಕೆ ತಂದಿರುವ ಕಲಾವಿದರ ಸ್ಮರಣೆಯೊಂದಿಗೆ ಬೆಳಕಿಗೆ ತರುತ್ತಿರುವ ಅರೆಬಾಷೆ ಅಕಾಡಾಮಿಯ ಸಲಹಾ ಸಮಿತಿಯವರಿಗೆ ಪ್ರಕಾಶಕರಿಗೆ, ಮುದ್ರಕರಿಗೆ ಆಭಾರಿಯಾಗಿರುವೆನು.

– ಟಿ.ಜಿ. ಮುಡೂರು

# ಬೊಳ್ಳಾಕನ ಮುಗ್ತ್

## ಪ್ರಹಸನದಲ್ಲಿ

1. **ಮಂಜ** – ಯಕ್ಷಗಾನದ ಖಯಾಲಿ – ಪದದಲ್ಲಿ ಆಡುವ ತಾಳದಲ್ಲಿ ನಡೆಯುವ ಗತ್ತಿನ ವಯಸ್ಸು 25 ಮೀರದ ಯುವಕ.
2. **ನಂಜ** – ಮಂಜನನ್ನು ಅನುಕರಿಸುವ – ಆತನ ಶಿಷ್ಯನಂತಿರುವ ವಯಸ್ಸು 25ರೊಳಗಿನ ಯುವಕ.
3. **ನಾಗಪ್ಪ** – ನಂಜನ ತಂದೆ – ವಯಸ್ಸು 50 ಮೀರಿದ ಬೇಟೆಯ ಹುಚ್ಚಿನ ದಪ್ಪದ ಹುರಿಮೀಸೆಯ ರಸಿಕ.
4. **ಶಿವಮ್ಮ** – ನಾಗಪ್ಪನ ಹೆಂಡತಿ. ವಯಸ್ಸು 45ರೊಳಗಿನ ತೆಳು ಪ್ರಕೃತಿಯ ಚಾಣಾಕ್ಷಿ.
5. **ಸೋಂಪ** – ನಾಗಪ್ಪನ ಸಮಪ್ರಾಯದ ಬಡಕಲು ಶರೀರದ ಸಾಧು ಸ್ವಭಾವ ನೆರೆಯವನು.
6. **ಗೌರು** – ಸೋಂಪನ ಹೆಂಡತಿ, ವಯಸ್ಸು 45 ಮೀರಿದ ತುಸು ದಪ್ಪಗಿನ ಗಯ್ಯಾಳಿ.
7. **ಮೋಂಟ** – ವಯಸ್ಸು 25 ಮೀರಿದ ಪೆದ್ದ ಯುವಕ.
8. **ಕುಶಲ** – ನಂಜ ಮಂಜರ ಸಮಪ್ರಾಯದ ಊರ ಸೋಂಬೇರಿ.
9. **ಕುಕ್ಕ** – ನಂಜ ಮಂಜರ ಸಮಪ್ರಾಯದ ಕುಶಲನ ನಿತ್ಯಸಂಗಾತಿ.
10. **ಸೀನ** – ನಂಜ ಮಂಜರ ಸಮಪ್ರಾಯದ ಕೋಳಿಕಟ್ಟದ ಹುಚ್ಚ.
11. **ಸೂರಯ್ಯ** – ನಂಜ ಮಂಜರ ಸಮಪ್ರಾಯದ ಸೀನನ ಒಡನಾಡಿ, ತೆಂಗಿನಕಾಯಿ ಕುಟ್ಟುವುದರಲ್ಲಿ ಶೂರ.
12. **ರಾಂಪ** – ವಯಸ್ಸು 40 ಮೀರಿದ, ಮದುವೆ ಸಂಧಾನ– ಮಾತುಗಾರಿಕೆ ಸುಧಾರಣೆ – ಕುಡಿತದಲ್ಲಿ ಮೊದಲಿಗ.

ನಾಟಕದಲ್ಲಿದ್ದು ಕಾಣಿಸಿಕೊಳ್ಳದ ತಿಮ್ಮಪ್ಪ ಮಾಸ್ತ್ರು – ಭಟ್ರು – ಭಟ್ರ ಹೆಂಡತಿ ಹಾರ್ತಿ ಮೋಂಟನ ಹೆಣ್ಣು ಮೋಂಟಿ – ಮದ್ದಳೆ ಆಚಾರಿ – ತಾಳಿ ಕಟ್ಟಿಸಿಕೊಂಡ ಗಂಗಜ್ಜಿ.

ನಾಟಕಕ್ಕೆ ಪೋಷಕರಾಗಿ ಕಾಣಿಸಿಕೊಳ್ಳುವ ಮದುವೆ ದಿಬ್ಬಣದವರು. ಚಪ್ಪರದಲ್ಲಿ ಅತ್ತಿತ್ತ ಸುಧಾರಣೆಗಾಗಿ ಓಡಾಡುವವರು ಯಕ್ಷಗಾನ ಮೇಳದ ಸದಸ್ಯರು.

ನಾಟಕದ ಕಾಲ ಮತ್ತು ದೇಶ : ಕಳೆದ ಶತಮಾನದ ಪೂರ್ವಾವಧಿ – ಅರೆಬಾಷೆ ಆಡುವ ಗ್ರಾಮೀಣ ಪ್ರದೇಶ. ರಚನೆ : 1956

# ಬೊಳ್ಪಾಕನ ಮುಗ್ತ್

## 1

*(ಮುಂಜಾನೆ ನಸುಬೆಳಕು ಬೀಳುವ ಹೊತ್ತು. ಬಯಲು ದಾರಿಯಲ್ಲಿ ನಿದ್ದೆ ಕಣ್ಣೊರೆಸಿಕೊಳ್ಳುತ್ತ ಏನನ್ನೋ ಕಳೆದುಕೊಂಡವನಂತೆ ಮುಖ ಮಾತ್ರ ಕಾಣಿಸಿಕೊಳ್ಳುವಂತೆ ಶಾಲು ಹೊದೆದುಕೊಂಡು ಬಂದ ದಾರಿಯತ್ತ ಮುಖ ತಿರುಗಿಸಿ ದೂರದಲ್ಲಿ ಕೇಳುತ್ತಿರುವ ಯಕ್ಷಗಾನ ಭಾಗವತರ ಪದವನ್ನು ಆಲಿಸಿ ತಾನೂ ಏರು ದನಿಯಲ್ಲಿ ಹಾಡಿನ ಚರಣದೊಂದಿಗೆ  ನಂಜನ ಪ್ರವೇಶ)*

**ನಂಜ : ನೋಡಿ ನಿರ್ಮಲ ಜಲಸಮೀಪದಿ । ಮಾಡಿಕೊಂಡರು ಪರ್ಣಶಾಲೆಯ.** ಹ್ಞಂ – ಈಗ ಮುಗ್‌ತ್‌ಂತ ಕಂಡದೆ. ಶಾಲೆಲಿ ಪಂಚವಟಿ ಪ್ರಸಂಗ. ತಾಳಮದ್ದಳೆ ಈಗ ಮುಗೀತಾ ಉಟ್ಟಷ್ಟೆ. ತಿಮ್ಮಪ್ಪ ಮಾಸ್ಟ್ರ ಜಾಗಟೆ ಎತ್ತಿ ಹಾಡ್ತಾ ಒಳೊ **ಕರದೊಳು ಪರಶು ಪಾಶಾಂಕುಶ ಧಾರಗೆ.** ಮಂಗಲ ಆಕನ ಮುಟ್ಟ ನಾ ನಿಲ್ಲದೆ ಹೊರಟೊಳೆ. ನಿಂತರೆ ಹೂಟೆಗೆ ಹೊತ್ತಾದೆಂತ ನಿದ್ದೆಗಣ್ಣಿಲೆ ಎದ್ದ್ ಹೊರಬಂದ್ ನೋಡ್ಕನ – ಅಂಗಳದ ಮೂಲೆಲಿ ಇಸಿದ ನನ್ನ ಜೋಡುಲಿ ಒಂದಿಲ್ಲೆ. ಯಾ ಗ್ರಾಚಾರ. **ಏನ ಮಾಡಲಿ ನಾನು ಪಾಂಡವರ ಸೋಲಿಪಡೆ.** ಈಗ ಎಲ್ಲೀಂತ ಹುಡುಕುದು. ನೋಡ್ರೆ ಇದ್ ಎರಡ್ ಕಾಲ್ ನಾಯಿಗಳ ಕತೆ ಅಲ್ಲಂತ ಕಂಡದೆ. ಖಂಡಿತ ಹಡಬೆ ನಾಯ್ಗಳೇ ಇರೋಕು. *(ಕಂಕುಳಲ್ಲಿ ಸುತ್ತಿದ ಪಾದರಕ್ಷೆಯನ್ನು ಎತ್ತಿ ನೋಡುತ್ತ.)* ಛೆ ! ಹೋತಲೆ ಇದರ ಜತೆ. ಮೊನ್ನೆ ಜಾತ್ರೆಲಿ ತಕ್ಕಂಡ ಹೊಸಜೋಡ್. ದುಡ್ಡು ಕೊಟ್ಟ್ ಕೈ ಬಿಸಿ ಆರ್‌ತ್‌ಲ್ಲೆ. **ಮಡದಿ ಜಾನಕಿ ಎಂಬರತುನವನು ಕಳಕೊಂಡು। ಬಿಡುದಾರವಾಯ್ತಲ್ಲೊ ತಮ್ಮಾ.** ಎಲ್ಲಿಂತ ಹುಡುಕಲಿ. ಈ ನಿದ್ರೆಕಣ್ಣಿಗೆ. **ಅಡವಿಗಿಡಮರಬಳ್ಳಿ ಅರಸಿನದ ಹುಡಿಯಂತೆ । ಕಾಣುತಿದೆ ತಮ್ಮಾ.** ರಾಮರಾಮಾ ! ಯಾರಾದರ್ ಬಂದ್ ಇದರ ಜತೆನ ಹುಡ್ಕಿ ಕೊಡಿ.  **ಎತ್ತ ಪೋದಳೋ । ಏನೇನಾದಳೋ । ಮಂದಗಾಮಿನಿ । ಮಧುರ ಬಾಷಿಣಿ ।***(ದೂರದಿಂದ*

ಮಂಜ ಪದದ ಗತ್ತಿನಲ್ಲಿ ಬರುವುದನ್ನು ನೋಡಿ) ಹ್ಞಂ – ಬಚಾವು ಬಂದೇ ಬುಟ್ರೊ ನನ್ನ ಯಕ್ಷಗಾನಗುರು ಮಂಜಣ್ಣ ಬಂದ್ರೊ.

**ಮಂಜ** : **ಬಂದನಾಗ । ರಥದಲಿ । ಬಂದನಾಗ.** (ಪದದೊಂದಿಗೆ ಪ್ರವೇಶಿಸಿ ನಂಜನನ್ನು ಸಮೀಪಿಸುತ್ತ) ನಂಜಾ ಏನ್‌ಯಾ? ಎಂಥಾ ಮೋಸ ಎಂಥಾ ಮೋಸ. ಒಟ್ಟಿಗೆ ಬಂದ್ ಒಟ್ಟಿಗೆ ಪೋಯಿಂತ ಮಾತ್‌ಕೊಟ್ಟ ನೀ. **ಎಂಥವನಯ್ಯ ನೀನು । ಹೇ ಗಯನೇ ಎಂಥವನಯ್ಯ ನೀನು.**

**ನಂಜ** : ಇಲ್ಲೆ ಮಂಜಣ್ಣ. ಹೂಟೆಗೆ ಹೊತ್ತಾದೇಂತ ನಾ ಬೇಗ ಹೊರ್ಟದ್. ನಂಗೆ ಕೊಟ್ಟದ್ ಸಂಪಾತಿ ಪಾತ್ರ. ಜಟಾಯು ಬಾಕನನೆ ಬೊಳ್ಪಾಗುಟ್ಟು. ಮತ್ತೆ ನಾ ಯಾಕೆ ಅಲ್ಲಿ ಕುದ್ರುದು.

**ಮಂಜ** : ಹೊದ್ದೊ ! ಆಗಲಿ ಆಗಲಿ. **ಆಯಿತುಸೇತುಕಟ್ಟಿ ರಾಜೇಂದ್ರ.** ನಾಳೆ ವಾಲಿ ಸುಗ್ರೀವರ ಕಾಳಗ ಉಟ್ಟಲೆ. ಅದರ್ಲಿ ಅಂಗದನ ಪಾತ್ರ ನಿಂಗೇಂತ್ತ ತಿಮ್ಮಪ್ಪ ಮಾಸ್ಟ್ರೊಟ್ಟೆಗೆ ನಾ ಹೇಳ್ನೆ.

**ನಂಜ** : ಬೇಡ ಬೇಡ. ನಾಳೆ ಅಂಗದ ಬಾಕನ ಬೊಳ್ಪಾಕೂ ಸಾಕ್. ಕೊಟ್ಟರೆ ಹನುಮಂತನ ಕೊಡಲಿ. ಹೀಂಗೆ ಮಾಡ್ರೆ ನಾ ಯಾಗಣ್ಣ ಅರ್ಥ ಕಲೀದು?

**ಮಂಜ** : **ಅಳುವುದೇತಕೆ ನೀತಾರೆ.** ನಂಜಾ ! ನಾ ಒಳೆ. ನಾ ನಿನ್ನ ಗುರು ಇರ್ಕನ. **ಅಂಜಬೇಡೆಲೆ ಸೀತೆ । ಮಿಥಿಲೇಂದ್ರ ತನುಜಾತೆ.** ಯಕ್ಷಗಾನ ಅಂದ್ರೆ ಸುಲಭಲಿ ಬಾರದ್. ಒಂದೆರಡ್ ದಿನ ಕಲ್ತ್ ಮುಗಿಯದ್. ಪದ, ಅರ್ಥ ಕೊಣ್ತ, ತಾಳ, ಮದ್ದಳೆ, ಚೆಂಡೆ, ಭಾಗತಿಕೆ ಎಲ್ಲ ಕಲಿಯೋಕು. ಅದರ ಕೇಳಿ ಕಲಿಯೋಕು. ನೋಡಿ ಕಲಿಯೋಕು. ಮಾಡಿ ಕಲಿಯೋಕು. ಮೇಳಲಿ ತಿರುಗೋಕು. ಆಟದ ಪೆಟ್ಟಿಗೆ ಹೊರೋಕು. ನಾಲ್ಕೂರು ತಿರ್ಗೊಕು. ಅದ್ ಬುಟ್ಟ್. **ಬಿಡುಬಿಡು ಶೋಕವ । ನುಡಿಯನು ಲಾಲಿಸು । ಪೊಡವಿಪ ಕೌರವನೆ**

**ನಂಜ** : ಮಂಜಣ್ಣ ! ನಾ ಎಲ್ಲಕ್ಕೂ ತಯಾರ್ ಒಳೆ. **ತಾತನೆ ನೀ ಕೇಳ್ । ಯಾತಕೆ ಪೊರಡುವೆ। ಆ ತರಳೆಯ ತರಲು.** ಯಾಗಣ್ಣ ಹೇಳ್ ನಮ್ಮ ಮೇಳ ಹೊರ್ಡುದು. ನಾ ರೆಡಿ ಒಳೆ. ಊರ್‌ಲಿ ಕೇಳ್ತಾ ಒಳೊ. ಯಾಗಂತ.

**ಮಂಜ** : ಹೊದೊ ? ಕೇಳ್ತಾ ಒಳಾನೊ ! ನಮ್ಮ ಕೇಪ್ಪಜ್ಜ ಸುರುಮಾಡ್ದ ಮೇಳನ ಗಂಜಿ ಮೇಳಂತ ಹಾಸ್ಯ ಮಾಡ್ತಿದ್ದ ಆ ಓದಿದ ಮಕ್ಕ ಈಗ ಕೇಳ್ತ ಒಳಾನೊ. ಅವು ಬಂದ್ ನನ್ನ ಕೇಳಲಿ. ಬಂದ್ ಬಣ್ಣ ಹಾಕಿ ಕುಣ್ಯಕೆ ಎಲ್ಲಾ ಒಳೊ. ಪೆಟ್ಟಿಗೆ ಹೊರಿಕೆ ಯಾರೂ ಇಲ್ಲೆ – ಬರಲಿ ಕೇಳಲಿ. ನಾ ಹೇಳ್ನೆ.

**ನಂಜ** : ಬಾವ ಹಬ್ಬದ ಹೊತ್ತ್ ಮೇಳ ಹೊರ್ಡೊಕೇ ಮಂಜಣ್ಣ. ಯಾರ್ ಬರದ್ದರೂ ಪೆಟ್ಟಿಗೆ ಹೊರಿಕೆ ನಾ ಒಳೆ.

**ಮಂಜ** : ನಾ ನೀ ಅಲ್ಲ. ಪೆಟ್ಟಿಗೆ ಹೊರಿಕೆ ರೆಡಿ ಇದ್ದವು ಬಣ್ಣ ಹಾಕಿಕೆ ಬರಲಿ. **ಬನ್ನಿರೈ ಸಂಸಾರ। ಶರಧಿಯನು ದಾಂಟುವರು । ಬನ್ನಿರೈ ಮೋಕ್ಷಗಾಮಿಗಳು.** ಬೊಳ್ಳಜೆ ಮೇಳನ ಕಟ್ಟುದು ಕಟ್ಟುದೆ. ನಮ್ಮ ತಿಮ್ಮಪ್ಪ ಮಾಸ್ಟ್ರ ಇರ್ಕನ. **ಬಿಡುಬಿಡು ಶೋಕವ । ನುಡಿಯನು ಲಾಲಿಸು ಪೊಡವಿಪ ಕೌರವನೆ.**

ನಮ್ಮ ಮಾಸ್ಟ್ರ ಹಗಲ್ ಶಾಲೆಲಿ ಪಾಠ ಹೇಳಿರೆ, ದೊಡ್ಡಪ್ಪೆ ರಾತ್ರೆ ಇಲ್ಲಿ ಯಕ್ಷಗಾನ ಕಲ್ಸಲಿ. ಅವೇ ಭಾಗವತರಾಗಿ ಮೇಳ ನಡೆಸಲಿ.

ನಂಜ : ಆಗಲಿ. ಆದರೆ ನೀ ಮೇಳದ ಯಜಮಾನ ಆದರೆ ಮೇಳ ಪೊರ್ಲುಲಿ ನಡ್ದದೆ. ಅವ್ರುದಣ್ಣ ನಂಗೆ ಎತ್ತ್ ಕಟ್ಟಿಕೆ ಹೊತ್ತಾದೆ ಬನ್ನೆ.

**ಮಂಜ** : ಹೊತ್ತಾದೆಂತ ಮತ್ತೆ ನೀ ನಿತ್ಕೊಂಡೊಳ. ಏನೊ ಹುಡ್‌ಕ್ತಾ ಒಳ–ಏನಿಯಾ ಕಾಲ್‌ನ ಜೋಡು ಕೈಲಿ. **ಎಂಥವನಯ್ಯ ನೀನು। ಹೇ ಗಯನೆ**

ನಂಜ : ಇದರ ಜತೆ ಇದ್ದರಲ್ಲಣ್ಣ ಕಾಲಿಗೆ ಹಾಕುದು. ಜತೆಲಿಟ್ಟದ್ದ್ ಈಗ ಇದರ ಜತೆ ಇಲ್ಲೆ. **ಎತ್ತ ಪೋದಳೋ । ಏನೇನಾದಳೋ.**

**ಮಂಜ** : ಥೇ ಥೆ ! ಹಾಂಗಾಗುಟ್ರೊ. **ಅಳುವುದೇತಕೆ ನೀ ತಾರೆ.** ಅದರ ಅತಳ ವಿತಳ ಸುತಳ ತಳಾತಳ ಪಾತಾಳ ಈರೇಳು ಹದಿನಾಲ್ಕು ಲೋಕ ಛಪ್ಪನ್ನೈವತ್ತಾರು ದೇಶಗಳೆಲ್ಲಿದ್ದರೂ ನಾ ಹುಡ್ಕಿ ಕೊಟ್ನೆ – ಕಂಡು ನಾಯಿಯೇ ಅದರ ಕಚ್ಚಿಕೊಂಡು ಹೋಗಿರೋಕು. ಈ ದಾರಿಲೇ ಹೋಗಿರೋಕು. ಅದರ ಹುಡುಕಿಯೇ ಹುಡುಕೊಕು. **ನಡೆಯೆಲೊ ಮುರಾರಿ ಸುಖದೊಳು । ಬರಿದೆ ಮಾತನಾಡಿ ಪೆಟ್ಟ ತಿನ್ನದೆನ್ನೊಳು.** ನಂಜಾ ! ನಾ ರಥವೇರ್ನೆ. ಪೋಯಿ ಪೋಯಿ. ಹಾರಲಿ ರಥ. **ಎಲ್ಲಿಗೆ ಒಯ್ದೆಯೋ ಸೀತೆಯ । ಬಿಡು । ಕಳ್ಳರಕ್ಕಸ ಜಗನ್ಮಾತೆಯ** *(ನಂಜ ಸಾರಥಿಯಂತೆ ಮಂಜ ರಥಾರೂಢನಂತೆ ಅಭಿನಯದ ಗತ್ತಿನಿಂದ ಗಮಿಸುವರು)*

# ಬೊಳ್ಳಾಕನ ಮುಗ್ತ್

## 2

*(ಮನೆ ಜಗಲಿ. ಮಂಚದ ಬಳಿ ನಿಂತುಕೊಂಡು ನಾಗಪ್ಪ ಕೇಪಿನ ಕೋವಿಯನ್ನು ಎತ್ತಿ ನಳಿಗೆಯನ್ನು ಒರೆಸಿ ಅದಕ್ಕೆ ಮದ್ದು ತುಂಬಿಸುವ ಕೆಲಸದಲ್ಲಿದ್ದಾರೆ. ಆಗಾಗ ಹುರಿಮೀಸೆಯನ್ನು ಬೆರಳಿನಿಂದ ತೀಡಿ, ಅದಾಗಲೇ ಊಟ ಮುಗಿಸಿದ ತೇಗಿನಲ್ಲಿ ನಳಿಗೆಗೆ ರಂಜಕ ತುಂಬಿಸಿ – ಗಜಕೋಲನ್ನು ಎಳೆದು ತೆಂಗಿನ ನಾರನ್ನು ಉಂಡೆ ಮಾಡಿ ತುಂಬಿಸಿ ಗಜಕೋಲಿಂದ ಎತ್ತಿ ಹಾಕಿ ಜಡಿದು ಮತ್ತೆ ಸೀಸದ ಚರೆಗಳನ್ನು ತುಂಬಿಸಿ ಮತ್ತೆ ತೆಂಗಿನ ನಾರಿಂದ ಜಡಿದು ತೃಪ್ತಿಗೊಂಡು ಒಳಮನೆಗೆ ಮುಖಮಾಡಿ)*

**ನಾಗಪ್ಪ** : *(ಕರೆಯುತ್ತ)* ಹೌದನೇ ! ಏ ಗೂಡೆನಯ್ಯೆ ! ಒಳನಾ ಒಳಗೆ ? ಏನ್ ಸುಡುಗಾಡ್ ಮಾಡ್ತಾ ಒಳ. ನಿನ್ನ ಕೆಬಿನೂ ಹೊಟ್ಟುಗಟ್ಟಿಟ್ಟೋ ಹೇಂಗೆ? ಕರ್ದರೆ ಓಕೊಣಿಕೆ ಬತ್ತೊ ?

**ಶಿವಮ್ಮ** : *(ಹೊರಗಿನಿಂದ ಮನೆ ಮೆಟ್ಟಲು ಹತ್ತಿ ಬರುತ್ತ)* ಬನ್ನೆ – ಕರೆದೊಟ್ಟಿಗೆ ಬಾಕೆ ನಾ ತೋಟಕ್ಕೆ ಹೋಗಿದ್ದೆ. ಹರಿಯಾಣಲಿ ವೀಳ್ಯದೆಲೆ ಮುಗ್ದುಟ್ಟು. ಮತ್ತೆ ಅಡಿಕೆ ಹೋಳ್ ಬಾಯ್ಗೆ ಹಾಕಿ ನನ್ನ ವೀಳ್ಯತಾಕೆ ಹೇಳ್ರೆ ಅಂತ.

**ನಾಗಪ್ಪ** : ಒಳ್ಳದಾತ್ ಬುಡ್ – ತಂಬ ಇತ್ತ. ಮತ್ತೆ ಒಳ ಒಲೆ ದೆಂಗಲಿ ಕೇಪಿನ ಕರಡಿಗೆ ಉಟ್ಟಲೆ ಅದರ ಇತ್ತ ತಂಬ. ಈಗನ ಕೇಮುಗ ಬರ್ಕತ್ ಇಲ್ಲೆ. ಬೆಚ್ಚಲೇ ಇಸೊಕಷ್ಟೆ. ಪಸೆ ತಾಂಗಿರೆ ಹೊಡಿಕನ ಟಾಪ್ ಡಂ. ಈಡೇ ತಪ್ಪಿ ಹೋದೆ. ಆ ತೋಡ್‌ನಾಚೆ ಬಸ್ರಿ ಮರಲ್ಲಿ ಕೇಂಕಣಗ ಬಂದ್ ಕುದ್ದವೆ. ಹಾಂಗೆ ಪರೆಚೆಲ್ಲ್ ತುಂಬ್ಸೊಳೆ. ಬೇಗ ತಂಬ. ಹೊತ್ತಾತ್. ಮತ್ತೆ ನೀ ಹುಳಿ ಮೆಣ್ಸ್ ಕಡ್ದ್ ಇಸ್. *(ಶಿವಮ್ಮ ಕೇಪಿನ ಕರಡಿಗೆ ತಂದು ಕೊಡವಳು. ನಾಗಪ್ಪ ಕೋವಿಯ ಕುದುರೆ ಎಳೆದು ಕೇಪನ್ನು ಇಟ್ಟು.*

ವೀಳ್ಯ ಬಾಯಿಗಿಟ್ಟು. ಹೊಗೆಸೊಪ್ಪಿನ ತುಂಡನ್ನು ಅಂಗೈಯಲ್ಲಿ ತಿಕ್ಕಿ ಬಾಯಲ್ಲಿ ಹಾಕಿ ಮತ್ತೊಮ್ಮೆ ಮೀಸೆಯನ್ನು ತಿದ್ದಿಕೊಂಡು ಹೆಗಲಿಗೆ ಕೋವಿಯನ್ನಿಟ್ಟು ಈಡಿನ ಚೀಲವನ್ನು ತೂಗಿಸಿಕೊಂಡು ಹೊರಡುತ್ತ ನೆನಪು ಮಾಡಿ) ಹೌದನೇ ! ಹೈದ ಇನ್ನೂ ಬಾತ್‌ಲ್ಲೆನೆ ? ಏತ್ ಬುಟ್ಟು ಮಧ್ಯಾಹ್ನ ಮೀರ್ತ್. ದೂರಲಿ ಬೈಲ್‌ಗದ್ದೆ ಇದ್ದರೆ ಆವುದಿಷ್ಟೆ. ಹೂಟೆ ಮಾಡುಟ್ಟೊ – ಆ ಮಂಜನ ಒಟ್ಟಿಗೆ ತಾಳಮದ್ದಳೆಗೆ ಹೋಗುಟ್ಟೊ. ಈ ತಾಳಮದ್ದೆ ಹುಚ್ಚ್‌ಲಿ ನಿದ್ದೆಗೆಟ್ಟ್ ಊಟೆ ಮಾಡ್ಕನ ಕೂಡಾ ಯಕ್ಷಗಾನ ಪದಗಡ. ಕಷ್ಟ ಈಗಣ ಮಕ್ಕಳ ಕತೆ ಹೇಳ್ರೆ.

**ಶಿವಮ್ಮ** : ಮಕ್ಕಳ ಯಾಕೆ ಹೇಳ್ದು. ದೊಡ್ಡರ ಕತೆನೂ ಅಷ್ಟೆ. ನೀವೂ ಅಷ್ಟೆ. ಕೋವಿ ತೆಕ್ಕೊಂಡ್ ಹೊರಟ್ರೆ ಬಾವುದು ಕತ್ತಲೆಗೆ. ಎಲ್ಲಿ ಹೋದರೇಂತ ನಂಗೆ ಹೇಳೋಕೊ. ಮತ್ತೆ ಗದ್ದೆಗಡ ಹೂಟೆಗಡ.

**ನಾಗಪ್ಪ** : ಮತ್ತೆ ಸುರುವಾತ್ ನಿನ್ನ ರಾಗ. ಎಲ್ಲಿಗೇಂತ ನಿಂಗೆ ಹೇಳೋಕೊ.

**ಶಿವಮ್ಮ** : ಮತ್ತೆಲ್ಲಿಗೆ? ಆ ಗೌರು ಉಟ್ಟಲೆ. ಮೀಸೆ ಹಣ್ಣಾದರೂ – ಮೊದ್ವೆಗೆ ಬೆಳೆದ ಮಕ್ಕ ಮನೇಲಿದ್ದರೂ ನಿಮ್ಮ ಹುಚ್ಚು ಇನ್ನೂ ಬುಟ್ಟತ್ತ್‌ಲ್ಲೆ. ನೀವು...

**ನಾಗಪ್ಪ** : ಸಾಕ್ಸಾಕ್. ನೀ ಮತ್ತೆ ಮತ್ತೆ ತೆಗೀಬೇಡ. ನಾ ಎಲ್ಲಿ ಹೋದರೂ ಆ ಗೌರು ಮೇಲೇ ನಿನ್ನ ಕಣ್ಣ್.

**ಶಿವಮ್ಮ** : ಮಾವ ಇರ್ಕನನೆ ಹಾಂಗೆ. ಈಗ ನಿಮ್ಮದೇ ಕಾರ್ಬಾರ. ನಾವು ಅಯ್ಯೆ ಮಕ್ಕ ಇಲ್ಲಿ ಗೈಯ್ಯಕೆ. ನೀವು ಎಲ್ಲಾ ಅದ್ಕೆ ತಿನ್ಸಿಕೆ. ಇಲ್ಲಿ ಹುಳಿ ಮೆಣ್ಸ್ ಕಡ್ಡಿಟ್ಟ್ ಕಾದರೆ ನೀವಲ್ಲಿ ಗೈಪು ಮಾಡ್ಸಿ ತಿಂದ್ ಬರಿಕೈಲಿ ಬಾವುದು. ಇನ್ನ್ನೀ ಹೀಂಗೆ ಮಾಡಿರೆ ಈ ನಡ್‌ಮನೆ ಕತೆ ಮುಗ್ತ್.

**ನಾಗಪ್ಪ** : ನಾ ನಿನ್ನ ಮೊದ್ವೆ ಆದ ಮೇಲೆ ನಿಂಗೆ ಏನ್ ಕಡಿಮೆ ಮಾಡ್ಯೊಳೆ ಹೇಳ್ – ತಲೆಗೆ ಎಂಣೆ, ಉಡಿಕೆ ಸೀರೆ.

**ಶಿವಮ್ಮ** : ಸಾಕ್ಸಾಕ್. ಕೈ ಹಿಡ್ಡ ಹೆಣ್ಣಿಗೆ ಅಷ್ಟೆ ಸಾಲದ್. ನೀವು ಮನೇಲಿಂತ ಎಷ್ಟ್ ದಿನ ಮನ್‌ಗ್ಯೊಳರಿ ಹೇಳಿ. ನಟ್ಟಿ ಪಾರಂತ ರಾತ್ರೆ ಮಾಡಂಗೋಲಿಗೆ ಹೋದು. ಅಲ್ಲಿ ಮೊಲ ಹೊಡೆಯೋದು ಬುಟ್ಟು ಮನುಗುದು ಆ ಗೌರು ಮನೇಲಿ. ಅವ್ಳ ಮೊಲೆ ಹಿಡ್ದ್. ಇದರ ನೆರೆಕರೆಯವೆಲ್ಲ ಹೇಳಿ ನಗಾಡ್ದು. ನಂಗೆ ಕೇಳಿಕೇಳಿ ಸಾಕಾತ್.

**ನಾಗಪ್ಪ** : ಥೂ... ಮುಗ್ತೊ ನಿನ್ನ ಪುರಾಣ. ಅಲ್ಲ ಇನ್ನೂ ಉಟ್ಟೊ. ನಿನ್ನ ಬಾಯಿ ಮುಚ್ಚಿಕೆ ಆ ಬ್ರಹ್ಮನೇ ಬರೋಕಷ್ಟೆ.

**ಶಿವಮ್ಮ** : ಅಂವ ಬಂದರೂ ನಿಮ್ಮ ಸರಿಮಾಡಿಕೆ ಬತ್ತ್. ಅಂದ್ ಆ ಪೂಕರೆ ಗದ್ದೆಗೋರಿ ದಿನ ನಡ್ಡ ಕತೆನ ಜನ ಇನ್ನ್ನೀ ಹೇಳ್ತಾ ಊರೆಲ್ಲ ನಗಾಡ್ತಾ ಒಳೊ. ಮಾಡಂಗೋಲಿಗೆ ಹೋದ ನೀವು ಅಂದ್ ಮನ್‌ಗಿದ್ದ್ ಗೌರು ಚಾಪೆಲಿ. ಬೊಳ್ಪು ಆಕೆ ಮುಂದೆನೇ ಗಡಿಬಿಡಿಲಿ ನಿಮ್ಮ ತೋರ್ತುನ ಚಾಪೆಲೆ ಬುಟ್ಟ್ ಅವಳ ತುಂಡು ಸೀರೆನ ತಲೆಗೆ ಸುತ್ತಿಕಂಡ್ ಏತ್‌ಕಟ್ಟಿ ಊರವರ ಒಟ್ಟಿಗೆ ಹೂಟೆ ಮಾಡ್ದ್‌ಗಡ. ಹೊತ್ತೇರ್ತ ಬಂದಾಂಗೆ ಗದ್ದೆಲಿ ನಿಮ್ಮ ತಲೆ ನೋಡಿ ಎಲ್ಲಾ ನೆಗಾಡ್ದೊ ಗಡ. ಆಗ ಆ ತುಂಡು ಸೀರೆನ ಗದ್ದೆ ಮೊಳಂಪಿಲಿ ಮೆಟ್ಟಿ ಅಡ್‌ಂಗಿಸಿದ್ ಮರ್‍ತುಟ್ಟೊ. ಅದರ ಹೇಳಿಕಂಡ್ ಈಗಲೂ ಊರವು

ನಗಾಡುವೆ. ಹೇಳಿಕೆ ನಂಗೇ ನಾಚ್ಕೆ ಆದೆ.

**ನಾಗಪ್ಪ** : ಥೂ... ತೆಗ್ದ ಬಾಯಿ. ನಗಾಡುವೆ ಗಡ – ನಿಂಗೆ ನಾಚಿಕೆ ಗಡ. ಎಂತ ಹೇಳೀಯ ನೀ.. ಅ ಹಳೆ ಕತೆನೆಲ್ಲ ನಿಂಗೆ ಹೇಳ್‌ದವ್ರ ಎದ್‌ರ್ ಹೇಳ್. ನನ್ನ ಗಂಡ ಹೆಣ್ಣಲ್ಲ – ಗಂಡ್‌ಂತ.

**ಶಿವಮ್ಮ** : ಲಾಯಿಕ್ ಹೇಳ್ರಿ. ಸಾಕ್. ನೀವು ಗಂಡ್ಸ್‌ಂತ ನನ್ನೊಟ್ಟಿಗೆ ಹೇಳೋಕಷ್ಟೆ. ಹೋಗಲಿ. ಬೇಗ ಹೋಗಿ ಏನಾರ್ ಹೊಡ್ಕಂಡ್ ಬನ್ನಿ. ಮಧ್ಯಾಹ್ನಕ್ಕೆ ನಾ ಬೇರೇನೂ ಮಾಡ್‌ತಿಲ್ಲೆ.

**ನಾಗಪ್ಪ** : ಆವ್ರುದು – ಬೇಗ ಬನ್ನೆ *(ಕೋವಿಯನ್ನು ಹೆಗಲಿಗಿಟ್ಟು ಇನ್ನೊಂದು ಬದಿಗೆ ಈಡಿನ ಚೀಲವನ್ನು ತೂಗಿಸಿಕೊಂಡು ಹೊರಬಾಗಿಲಿಗೆ ಬಂದು ದೂರಕ್ಕೆ ನೋಡಿ)* ಯಾರ್ ? ಯಾರದ್ ಇತ್ತ ಬಾವ್ರುದು. ಲ್ಯಾಕಾತ್ ಅದ್ ಅಡ್ಕತರೆ ಮೋಂಟ ಹೈದ – ಸರಿಹೋತ್ – ಕಾರ್ಯಕ್ಕೆ ಹೋಕನ ಇವ ಇದಿರ್‌ಬಂದರೆ ಹೋದ ಕಾರ್ಯ ಆದಾಂಗೆ. ಒಂಟಿ ಹಾರವ ಬಂದಾಂಗೆ. *(ಕೋವಿ ತೆಗೆದು ಜಗಲಿ ಮೂಲೆಗೊರಗಿಸಿ ಚೀಲವನ್ನು ಮಂಚದ ಮೇಲಿಟ್ಟು)* ಅವ ಬಂದ್ ಹೋಗಲಿ. ಮತ್ತೆ ಹೋನೆ *(ಮೋಂಟ ಬರುತ್ತ ಮೆಟ್ಟಿಲು ಹತ್ತುವಷ್ಟರಲ್ಲಿ)* ಏನ್‌ಯಾ.. ಮೋಂಟ ಭಾರಿ ಅಪ್ರೂಪ. ಮೊನ್ನೆ ಲೈಟಿಗೆ ಪೋಯಿಂತ ಹೇಳ್ದವ ನೀ ಬಾತೇ ಇಲ್ಲೆ.

**ಮೋಂಟ** : *(ಒಳ ಪ್ರವೇಶಿಸುತ್ತ)* ಇಲ್ಲೆ ಅಜ್ಜಪ. ಬಾಕೆ ಆ ಅಯ್ಯನ ಬುಟ್ಟಿ ಮಾಡುದರ್‌ಂದ ಬುಡುಗಡೆ ಉಟ್ಟೊ ? – ಹಗಲ್ ರಾತ್ರಿಂತ ಪುರ್ಸೊತ್ತೇ ಇಲ್ಲೆಂತ.

**ನಾಗಪ್ಪ** : ಏನಿಯಾ ಅದ್. ಹಗಲ್ ರಾತ್ರೀಂತ. ನಿನ್ನ ಆ ಭಟ್ರ್ ರಾತ್ರಿನೂ ಜಂಬರ ಸುರುಮಾಡ್ಯೊಳೊ ಹೇಂಗೆ? ಗೇರ್ ಹಣ್ಣ್ ಸುರುವಾವ್ರುದಷ್ಟೆ. ಇಷ್ಟ್ ಬೇಗ.

**ಮೋಂಟ** : ಅಲ್ಲ ಅಜ್ಜಪ. ಇದ್ ಬೇರೆ ಜಂಬರ. ಈಗ ನಂಗೆ ಅಮ್ಮಂಗೆ ಅಲ್ಲಿ ಪುಕುಳಿ ತುರ್ಸಿಕೆ ಪುರ್ಸೊತ್ತಿಲ್ಲೆ. ಇಂದಾ ಮೋಂಟ ಇತ್ತಬಾ ಇಂದಾ ಮೋಂಟ ಅತ್ತ ಹೋಗ್. ಇಂದಾ ಮೋಂಟ ಎಲ್ಲಿ ಒಳಾಂತ ಅಯ್ಯ ಹೊರಗೆಂದ ಅಮ್ಮ ಒಳಗಂದ ಕರೇಕನ ಅಯ್ಯನ ಬುಟ್ಟಿ ಅಲ್ಲಲ್ಲೇ ಬಾಕಿ.

**ನಾಗಪ್ಪ** : ಅದಕ್ಕೆ ಹೇಳುವೆ ನೋಡ್. ನಮ್ಮವು ಸತ್ತವರ ಸ್ವರ್ಗಕ್ಕೆ ಏರ್ಸಿಕನ 'ಹಾರವನ ಆಳಾಗಬೇಡ – ಮಡ್ಯೊಳನ ಕಲ್ಲಾಗಬೇಡ – ಕ್ಷೌರಿಗನ ಬಾಳಾಗಬೇಡಾಂತ ಹೇಳುದರ ಕೇಳ್‌ಲ್ಲೆ ನೀ..!

**ಮೋಂಟ** : ಕೇಳ್ಯೊಳೆ ಅಜ್ಜಪ್ಪ. ನೀ ಸ್ವರ್ಗಕ್ಕೇ ಹೋಗುಂತ ಸತ್ತವರ ಕಳ್ಸುವೆ. ಆದರೆ ಬದ್‌ಕಿರ್ಕನ ಬೇರೆವರ ಬುಟ್ಟಿ ಮಾಡದೆ ಈ ಹೊಟ್ಟೆ ತುಂಬೊಕಲೆ ಹೇಳಿ.

**ಶಿವಮ್ಮ** : ಅದಿಕ್ಕೇ ನಾ ಹೇಳ್ದು. ಮೊದ್‌ಲ್ ನೀ ಒಂದು ಮೊದ್ವೆ ಆಕು. ಆ ಹಾರವರ ಕುಂಡೆ ತುರ್ಸೋದು ಬುಡೊಕು.

**ನಾಗಪ್ಪ** : ಹೌದ್ನೆ ಹೈದ. ಮೊದ್‌ಲ್ ನೀ ಒಂದು ಮನೆ ಮಾಡ್.

**ಮೋಂಟ** : ಯಾರೊಳೊ ಅಜ್ಜಪ. ಮನೆ ಮಾಡಿಕೆ. ಮೊದ್ವೆಗಡ ! ಯಾರ್ ಹೆಣ್ಣ್ ಕೊಟ್ಟವೆ ನಂಗೆ.

**ಶಿವಮ್ಮ** : ಗೂಡೆಗಳಿಗೆ ಬರಗಾಲನೊ. ನಿಂಗೇನ್ ಕಣ್ಣಿಲ್ಲೆನೊ ಕಾಲಿಲ್ಲೆನೊ. ಅಪ್ಪ ಅಯ್ಯೆ ಇಲ್ಲದ್ದರೆ ಏನಾತ್. ಒಟ್ಟು ನೀ ಮೊದ್ವೆಗೆ ಮನಸ್ಸ್ ಗಟ್ಟಿ ಮಾಡೋಕು.

**ಮೋಂಟ** : ಆದು. ಅಜ್ಜವ ನೀವು ಹೇಳ್‌ದರ ಕೇಳ್ನೆ.

**ಶಿವಮ್ಮ** : ಕೇಳಿರೆ ಸಾಲದ್. ರಾತ್ರಿ ನೋಡ್ ಸಾಲೆಲಿ ಯಕ್ಷಗಾನ ಆಟ ಕಲ್ಸುವೆ. ನಿನ್ನ ಪ್ರಾಯದವೆಲ್ಲ ಅಲ್ಲಿ ಹೋದವೆ. ಅವರ ಆಟದ ಮೇಳಲಿ ಸೇರಿ ನೀ ಕೂಡಾ ಕಲಿಯೋಕು. ಸಣ್ಣದಿರ್ಕನ ನೀ ಸಾಲೆಗೆ ಹೋತ್‌ಲ್ಲೆ. ಈಗ ರಾತ್ರಿ ಸಾಲೆಗೆ ಹೋಗಿ ಕಲಿ. ನಾ ನನ್ನ ಮಂಜನೊಟ್ಟಿಗೆ ಹೇಳ್ನೆ ನಿಂಗೆ....

**ನಾಗಪ್ಪ** : ಹೌದ್ನೆ – ನಿನ್ನ ಅಜ್ಜವ ಹೇಳ್ದರ ಕೇಳ್. ನೀ ಆಟದ ಮೇಳ ಸೇರಿರೆ ನಿನ್ನ ಮೊದ್ವೆ ಆವುದು ನಿಗಾಂಟ್ – ಹೋಗಲಿ ಹೊತ್ತಾತ್. ನೀ ಯಾಕೆ ಬಂದ ? ಬೇಗ ಹೇಳ್ ಮತ್ತೆ.

**ಮೋಂಟ** : ಅದ್.. ಅದ್...

**ಶಿವಮ್ಮ** : ಮೊದ್ವೆ ಮಾತ್ ತೆಗ್ದ್ – ಬಂದ ಕೆಲ್ಸ ಮರ್ತೋತೊ ಹೇಂಗೆ? ಅಯ್ಯನ ಬುಟ್ಟಿನೆ ಇರೋಕು.

**ಮೋಂಟ** : ಇಲ್ಲೆ ಅಜ್ಜಪ ಅಮ್ಮಂದ್ – ಒಮ್ಮೆ ದೊಡ್ಡ ಕಂಚಿನ ಉರ್ಳಿ ಕೊಡೊಕಡ.

**ನಾಗಪ್ಪ** : ಯಾಕೆ ? ಕೇಳ್ತಿಲ್ಲೆನಾ ನೀ.

**ಮೋಂಟ** : ಕೇಳೊಕೊ – ನಾಡ್‌ದ್ ಅಜ್ಜಯ್ಯನ ಸಾರ್ದ ಗಡ. ವಡೆ ಕಾಸಿಕೆ ಇರೊಕು.

**ನಾಗಪ್ಪ** : ಸರಿ. ಹಾಂಗಾರೆ ನಿಂಗೂ ಉಟ್ಟು ವಡೆಪಾಯ್ಸ (*ಶಿವಮ್ಮನಲ್ಲಿ*) ಂದಾ ಅಟ್ಟಂದ ದೆವ್ವದ ಉರ್ಳಿ ಮತ್ತೆ ಅದರ ಸಟ್ಟುಗ ತಂದ್ ಮೋಂಟಂಗೆ ಕೊಡ್. ಂದಾ ಮೋಂಟ ಇದರ ಜಾಗ್ರತೇಲಿ ಕೊಂಡು ಹೋಕು. ಎಲ್ಲಾರ್ ಬಿದ್ದ್ ಒಡಿಯದೆ. ನಿನ್ನ ಹಾರ್ತಿಗೂ ಹೇಳ್ ಬಲ. ಇದ್ ಊರ ದೆವ್ವ ಪಿಲಿಚಾಮುಂಡಿದ್. ಹರ್ಕೆ ಹೇಳಿ ಒಪ್ಪಿಸಿದ್‌ಂತ. ವಾಪಾಸ್ ತಾಕನ ಅದರ್ಲಿ ಒಂದು ಸೂಡಿ ವೀಳ್ಯ, ಐದಡಿಕೆ, ಒಂದು ಪಾವಲಿ ಇಸುವ ಕ್ರಮ ಉಟ್ಟು. ಭಟ್ರೊಟ್ರಿಗೆನೂ ಹೇಳ್ ಅದ್ ದೆವ್ವದ ಭಂಡಾರಕ್ಕೆ – ಗೊತ್ತಾತಲೆ !

**ಮೋಂಟ** : ಆವುದು ಅಜ್ಜಪ. ಅಮ್ಮನೊಟ್ಟಿಗೂ ಹೇಳ್ನೆ. ನಮ್ಮ ಪಿಲಿಚಾಮುಂಡಿ ಬಾರಿ ಕಾರ್ಣಿಕದ್‌ಂತ ನಂಗೆ ಹೇಳೋಕೊ. ಊರವು ಬೇಟೆಗೆ ಹೋಕನ ಅದ್ಕೆ ದೀಪ ಇಸಿದೇ ಹೋವುದಲ್ಲೊ (*ಶಿವಮ್ಮ ಉರುಳಿ ಮತ್ತು ಸಟ್ಟುಗವನ್ನು ತಂದು ಮೋಂಟನ ಮುಂದಿಡುವಳು. ಮೋಂಟ ಅದನ್ನು ಎತ್ತಿ ನೋಡಿ*) ಭಾರಿ ಭಾರ ಉಟ್ಟು ಅಜ್ಜಪ. ಹೇಂಗುಟ್ಟು ನೋಡಿ ಹೆಗಲಿಗಿಸಿರೆ ಭರ್ತಿ ಒಂದು ಮಣ ಆವುದು. ಹೇಂಗಜ್ಜಪ ಇದ್ ದೈವಕ್ಕೆ ಹರ್ಕೆ ಬಂದದ್.

**ನಾಗಪ್ಪ** : (*ಉತ್ಸಾಹದಿಂದ*) ಹೋ ! ಅದ್ ನಿಂಗೆ ಗೊತ್ತಿಲ್ಲೆಂತ ಕಂಡದೆ. ಹೇಳ್ನೆ. ಇದ್ ಬಾರಿ ಹಿಂದೆ ನಾ ಸಣ್ಣದಿರ್ಕನ ಬಂದದ್. ನನ್ನಪ್ಪಂಗೆ ಆಗ ಜವ್ವನ. ಅವು ಭಾರಿ ಈಡ್‌ನವುಂತ ಊರಿಗೇ ಹೆಸ್ರ್ – ಂದಾ ಆ ಹರಿವಾಣ ಇತ್ತ ತಂಬ. ಒಂದು ಈಡ್ ಹಾಕ್ಕೊಂಡ್ನೆ, ಬಾಯಿ ಚಪ್ಪೆ ಆದೆ (*ವೀಳ್ಯ ತಿನ್ನುತ್ತ*) ನೀ ಕೂಡ ಹಾಕ್ಕ.

**ಮೋಂಟ** : (*ತಾನೂ ತಿನ್ನುತ್ತ*) ನಿಮ್ಮಪ್ಪ ಆ ದೊಡ್ಡಜ್ಜಪನ ನಾ ನೋಡ್‌ತ್ಲೆ. ಈಡ್‌ಲಿ ನಿಮ್ಮಂಗೆ – ನಿಮ್ಮ ಮೀಸೆ...

**ನಾಗಪ್ಪ** : ನೋಡಿಕೆ ನೀ ಹುಟ್ಟೊಕಲೆ ಹೈದ. ಆ ಅಪ್ಪನ ಈಡ್ – ಆ ದೊಡ್ಡ ಮೀಸೆ. ಅವು ಆ ಕೊತ್ತಳಿಕೆ ಬತ್ತಿ ಕೋವಿ ಹಿಡ್ದ್ – ಕಾಡಿಲಿ ಗುಂಡು ಕೇಳಿರೆ ಯಾದಾರ್ ಮೃಗ ಬೀತ್‌ಂತ್ಲೆ ಲೆಕ್ಕ.

**ಮೋಂಟ** : ಆ ಕೋವಿ ಈಗೆಲ್ಲುಟ್ಟು ಅಜ್ಜಪ.

**ನಾಗಪ್ಪ** : ಅದ್ ಅಟ್ಟಲಿ ಉಟ್ಟು. ಈಗ ಯಾರ್ ಹಿಡ್ದವೆ ಅದರ. ಆಗ ಈ ಲೈಟ್ ಎಲ್ಲಿತ್ತ್ – ಕಾರ್ ಬೆಟ್ರಿ ದೀಪಲಿ ಮೃಗ ಕಣ್‌ಕೊಡ್‌ಕನ ಹೊಡಿಯೋಕು. ಆ ಅಪ್ಪನಕಾಲ ಮುಗ್ತ್. ನಾ ಮಂಜನ ಕಾಲಕ್ಕೆ ಕೇಪಿನ ಕೋವಿ ತೆಗ್ದದ್. ಇದರ್ಲಿ ಹೊಡ್ದ ಹುಲಿ, ಹಂದಿ, ಕಡ್ವೆ, ಕೆಮ್ಮಗಳಿಗೆ ಲೆಕ್ಕ ಉಟ್ಟೊ.

**ಮೋಂಟ** : ಅದರ ಹೇಳೊಕೊ ಅಜ್ಜಪ. ನಂಗೆ ಗೊತ್ತುಟಲೆ. ಯಾರೊಳೊ ಹೇಳಿ ನಿಮ್ಮಂಗೆ ಈಡ್‌ನವು ಈ ಊರಿಲಿ ?

**ನಾಗಪ್ಪ** : (ಮೀಸೆಯನ್ನು ತಿದ್ದುತ್ತ) ಹಾಂಗೆ ಹೇಳ್. ಅಪ್ಪ ನನ್ನಂದಳೂ ಹತ್ ಪಟ್ಟ್ ಬಿರ್ಸ. ಈ ಕೇಪಿನ ಕೋವಿ ತೆಗ್ದ ಹೊಸ್ತ್ ನೋಡ್. ಅಪ್ಪನೂ ಇದರ್ಲಿ ಭಾರಿ ಬಲಿಪ್ಪಗಳ ಹೊಡ್ದೊಳೊ. ಆಮೇಲೆ ನಮ್ಮ ಮೇಗಡೆಗದ್ದೆ ಭಟ್ರ್ ತೋಟೆ ಕೋವಿ ತೆಗ್‌ದದ್. ಅದ್ ಭಾರಿ ಕೋವಿ, ಎರಡ್ ನಳಿಗೆದ್. ವಿಲಾಯ್ತಿ ಕಂಪೆನಿದ್. ಭಟ್ರೆಗೆ ಹೊಸ ಕೋವಿ ಬಾವುದು ಊರ್‌ಲಿ ಒಂದು ಬಾರೀ ಹುಲಿಕಾಟ ಸುರು ಆವುದು ಸರಿ ಅತ್ !

**ಮೋಂಟ** : ಆ ಹುಲಿನ ಭಟ್ರ್ ತೋಟೆ ಕೋವಿಲಿ ಹೊಡ್ದೊಂತ ಕಂಡದೆ.

**ನಾಗಪ್ಪ** : ಇಲ್ಲೆಯಾ. ಅದೇ ಹುಲಿನ ಹೊಡೆಕೆ ಹೋಗಿ ದೆವ್ವಕ್ಕೆ ಹರಿಕೆ ಉರ್ಳಿ ಬಂದದ್.

**ಮೋಂಟ** : ಹೇಂಗಜ್ಜಪ. ಹೇಳಿ ಹೇಳೀ. ಅವು ಒಬ್ಬನೇ ಹೋದೊ ಹುಲಿ ಹೊಡಿಕೆ ?

**ನಾಗಪ್ಪ** : ಒಬ್ಬನೆ ಅಲ್ಲಯ. ಅಷ್ಟ್ ಬೆಟ್ರಿ ಬೇಕಲೆ ಭಟ್ರೆಗೆ. ಕೋವಿ ಹೊಸ್ತ್ ಬಂದ ಗತ್ತ್ ನೋಡ್. ಆದರೆ ಯಾವ ಮೃಗ ಹೊಡ್ದ ಅನುಭವ ಭಟ್ರಗಿಲ್ಲೆ. ಹುಲಿ ಬುಡು; ಒಂದು ಕೆಂಪ ಕೂಡ ಹೊಡ್ದವು ಅಲ್ಲ. ಹಿಂಗೆ ಅಪ್ಪನ ಹುಲಿ ಹೊಡ್ಸಿಕೆ ಪೋಯಿಂತ ಪುಸಲಾಯ್ಸಿದೊ. ಅಪ್ಪಂಗೆ ಅಷ್ಟ್ ಹೇಳ್ರೆ ಸಾಕ್. ಈ ಕೇಮ ಕೋವಿ ತಕಂಡ್ ಹೊರಟೊ. ಭಟ್ರ್ ಹೇಳ್ದೊ. ಬೇಡ ಗೌಡಜ್ಜ. ನಿನ್ನ ಕೇಪಿನ ಕೋವಿ ಬೇಡ. ನನ್ನದ್ ತೋಟೆ ಕೋವಿಯುಟ್ಟಲೆ. ಇದೇ ಸಾಕ್, ನನ್ನ ಹಕ್ಕಲೆ ನೀ ಇದ್ದರೆ ಸಾಕ್. ನಾನೇ ಹುಲಿ ಹೊಡ್ದನೆಂತ. ಅದಿಕ್ಕೆ ಅಪ್ಪನೂ ಹೂಂಗುಟ್ಟಿದೊ – ಸರಿ ಕತ್ತಲಾವ ಮುಂದೆನೇ ಭಟ್ರ್ ಕಾಕಿ ಚೆಡ್ಡಿ ಹಾಕಿ ಸೊಂಟಕೆ ಬೆಲ್ಟ್ ಸುತ್ತ ತೋಟೆ – ತಲೆಗೆ ಲೈಟ್ ಕಟ್ಟಿದ ಹೇಟ್ ಇಸಿಕಂಡ್ ಮನೆಗೆ ಬಂದೊ. ಅವರೊಟ್ಟಿಗೆ ಅಪ್ಪನೂ ಹೊರಟೊ.

**ಮೋಂಟ** : ನಮ್ಮ ದೊಡ್ಡಜ್ಜಪನೂ ಭಟ್ರ ಜತೆಗಿದ್ದೊ. ಹುಲಿ ಹೊಡ್ದದ್ ಯಾರ್?

**ನಾಗಪ್ಪ** : ಹೇಳ್ನೆ ಕೇಳ್. ಹೊರಡ್‌ಕ್ಕನ ಭಟ್ರ ಪೌರುಷ ಕೇಳೊಕು. ಗೌಡಜ್ಜ ! ನೀ ನಂಗೆ ಹುಲಿ ತೋರ್ಸಿರೆ ಸಾಕ್. ಒಂದೇ ತೋಟೆಲಿ ಉರಿಳ್ಸಿನೆ ನೋಡ್. ನನ್ನ ಕೋವಿ ಈಡ್ ಹೇಂಗುಟ್ಟುಂತ ಮತ್ತೆ ಹೇಳ್. ಅಂತ ಇಬ್ಬರೇ ಹೊರ್ಟೊ. ಮುಂದೆನ ದಿನ ಅವರ ದನ ಒಂದರ ಹುಲಿ ಹಿಡ್ದೆ ಅದ್ರ ಪೂರ ತಿನ್ನದೆ ಕಾಡ್‌ಲಿ ಬುಟ್ಟುಹೋಗುಟ್ಟು ನೋಡು. ಅದಿಕ್ಕೆ ಇಂದ್ ಬಂದೇ ಬಾದೂಂತ ಭಟ್ರ್ ಮಧ್ಯಾಹ್ನನೇ ಅಲ್ಲಿ ಮರಲ್ಲಿ ಕುದ್ರಿಕೆ ಅಟ್ಟಳಿಕೆ ಮಾಡ್ಸಿ ಆಗಿತ್ತ್. ಕತ್ತಲಾವ ಮುಂದೆನೇ ಇಬ್ಬರೂ ಹೋಗಿ ಮರ ಹತ್ತಿ ಅಟ್ಟಳಿಕೆಲಿ ಕುದ್ದೊ. ಮಾತ್‌ಕತೆ ಇಲ್ಲೆ. ಎಲ್ಲ ಕೈ ಸನ್ನೆಲಿ. ಕಾದೊ ಕಾದೊ ಗಂಟೆ ಒಂದಾತ್, ಎರಡಾತ್ ಹುಲಿ ಬಾವ ಲಕ್ಷಣನೆ ಇಲ್ಲೆ.

**ಮೋಂಟ** : ಛೇ – ಹುಲಿ ಬಾತಿಲ್ಲೆ ಮತ್ತೆ.

**ನಾಗಪ್ಪ** : ಇಲ್ಲೆ. ಆದರೆ ಇದ್ ಬಂದೇ ಬಾದೂಂತ ಅಪ್ಪನ ಎಣಿಕೆ. ಭಟ್ರೆಗೆ ಹುಲಿ ಬಾತ್‌ಲ್ಲೆಂತ ಬೇಜಾರ್. ಎಂತ ಮಾಡುದು? ಎಷ್ಟ್‌ಂತ ಕಾಯುದು. ಅಪ್ಪ ಭಟ್ರೊಟ್ಟಿಗೆ ಮೆಲ್ಲಂಗೆ ಹೇಳ್ದೊ. ನಾವು ಬಾಕನ ದೆವ್ವಕ್ಕೆ ದೀಪ ಇಸಿಕೆ ಮರ್ತೊಳಂತ. ಭಟ್ರ್ ಹೇಳ್ದೊ ಎಂತಯ ನಿನ್ನ ದೆವ್ವ. ಅದಿಕ್ಕೆ ಇಲ್ಲಿಂದಲೇ ಒಂದ್ ಹರ್ಕೆ ಹೇಳ್. ಹುಲಿ ಬಂದರೆ ನಿನ್ನ ದೆವ್ವಕ್ಕೆ ಒಂದ್ ಕಂಚಿನ ಉರ್ಳಿ ಮಾಡ್ಸಿ ಒಪ್ಸಿನೇಂತ. ಅಪ್ಪ ಹಿಂದೆ ಮುಂದೆ ನೋಡದೆ ಹುಲಿ ಬಾಕೆ ಮನಸ್ಸ್‌ಲೇ ದೆವ್ವಕ್ಕೆ ಹರಕೆ ಹೊತ್ತೊ.

**ಮೋಂಟ** : *(ಆತುರದಿಂದ)* ಬಾತೊ ಅಜ್ಜಪ ಹುಲಿ. ಯಾರ್ ಹೊಡ್ದೊ.

**ನಾಗಪ್ಪ** : ಹೇಳ್ನೆ ಕೇಳ್. ತೋಟಿಕೋವಿ ಭಟ್ರ ಕೈಲಿ. ಲೈಟ್ ಅಪ್ಪನ ಕೈಲಿ. ದೂರಲಿ ಬಲ್ಲೆ ಪೊದರ್ ಅಲ್ಲಾಡುವ ಶಬ್ಧ ಕೇಳ್ತ್. ಅಪ್ಪ ಅತ್ತ ಲೈಟ್ ಹಾಕಿದೊ. ಆಗ ಕಂಡತ್ತ್ ನೋಡ್. ದೊಡ್ಡ ಅಕ್ಕಿಮುಡಿಯಷ್ಟ್ ದೊಡ್ಡ ತಲೆ. ಕೆಂಪಂಗೆ ಕೆಂಡ ಚೆಂಡ್‌ನ ಹಾಂಗೆ ಎರಡ್ ಕಣ್ಣ್‌ಗ. ಬಾಲ ನಿಗುರ್ಸಿ, ನಾಲಗೆಂದ ಹಲ್ಲ್ ಮೀಸೆ ನೆಕ್ಕಿಕಂಡ್ ಬಾವ ಅಡ್ಡಬಲಿಪ ! ಬಾತ್ ಬಾತ್ ಮುಂದೇಗೇ ಬಾತ್. ಸುಮಾರ್ ಹದಿನೆಂಟ್ ಮೆಟ್ಟ್ ಉದ್ದದ ಹುಲಿನ ಪಟ್ಟೆಗಳ ನೋಡಿ ಭಟ್ರ ಕೋವಿನ ಸದ್ದೇ ಇಲ್ಲೆ. ಅದರ ಹಣೆಗೆ ಲೈಟ್ ಹಾಕಿದ ಅಪ್ಪ ಹುಲಿ ಹೊಡೆಕೆ ಭಟ್ರೆಗೆ ಸನ್ನೆ ಮಾಡ್‌ದೊ. ಭಟ್ರ್ ಹುಲಿನ ಹೊಡೆದು ಬುಟ್ಟು ಗಡಗಡಾಂತ ಅಟ್ಟಳಿಗೆನ ನಡ್ಗ್‌ಸಿಕೆ ಸುರುಮಾಡ್ದೊ. ಎರಡ್‌ೀ ಒಟ್ಟಿಗೆ ಮಾಡಿಕೊಂಡೊ. ಹೆದ್ರಿಕಂಡ್ ಹೇಳ್ದೊ. ಗೌಡಜ್ಜ ! ಬಂದ ಹುಲಿ ಬಂದಾಂಗೆ ಹೋಗಲಿ. ಉರ್ಳಿ ಜತೆ ಅದಕ್ಕೆ ಒಂದು ಸಟ್ಗಾನೂ ಒಪ್ಪಿಸಿನೇಂತ ದೆವ್ವಕ್ಕೆ ಹೇಳ್‌ಂತ ಹೇಳ್ದೊ. ದೆವ್ವದ ಸತ್ಯ ನೋಡ್. ಸ್ವಲ್ಪ ಹೊತ್ತಾಕನ ಬಂದ ಹುಲಿ ಬಂದಾಂಗೆ ಹೋತ್. ತುಂಬಾ ಹೊತ್ತ್ ಕಳ್ದ್ ಅಪ್ಪ ಭಟ್ರ್ ಮರಂದ ಇಳ್ದ್ ಬಂದೊ. ಹೀಂಗೆ ಮೇಗಡೆ ಭಟ್ರ ಅಪ್ಪ ನಮ್ಮ ಪಿಲಿಚಾಮುಂಡಿಗೆ ಹರ್ಕೆ ಒಪ್ಸಿದ್ ಈ ಉರ್ಳಿ ಮತ್ತೆ ಸಟ್ಗ. ಇದಕ್ಕೆ ದೆವ್ವದಷ್ಟೆ ಸತ್ಯ ಉಟ್ಟು.

**ಮೋಂಟ** : ಸತ್ಯ ಇಲ್ಲದೆ ಎತ್ತ ಹೋದೆ. ಆ ಹುಲಿ ಮತ್ತೆಲ್ಲಿ ಹೋತ್ ಅಜ್ಜಪ.

**ನಾಗಪ್ಪ** : *(ನಗುತ್ತ)* ಎಲ್ಲೊಳ ನೀ – ಅದ್ ನಿಜ ಹುಲಿ ಅಲ್ಲ ಹೈದ... ಪಿಲಿಚಾಮುಂಡಿಯೇ ಭಟ್ರ ಕಣ್ಣಿಗೆ ಕಂಡದ್.

**ಮೋಂಟ** : ಇರುದಜ್ಜಪ. ಅಂತೂ ಭಟ್ರೆಗೆ ದೆವ್ವದ ಬಲ ಗೊತ್ತಾತಲೆ.

**ನಾಗಪ್ಪ** : ಭಟ್ರೆಗೆ ದೆವ್ವದ ಸತ್ಯ ಗೊತ್ತಾತ್. ದೆವ್ವಕ್ಕೆ ಉರ್ಳಿ ಸಟ್ಗ ಬಾತ್. ಈಗ ಯಾರ್ ಕಾಡಿಗೆ ಹೋದಿದ್ದರೂ ದೆವ್ವನ ನೆನೆದೇ ಹೋದವೆ. ಹೋಗಲಿ ಬುಡು.

**ಶಿವಮ್ಮ** : *(ಒಳಗಿನಿಂದ ಮತ್ತೆ ಬಂದು)* ಮುಗ್‌ತಿಲ್ಲೆ ನಿಮ್ಮ ಹುಲಿ ಪುರಾಣ. ಆ ಹುಲಿ ಭಟ್ರ ಕತೆ ಇವ್ಕೆ ಹೇಳ್ದಷ್ಟ್ ಮುಗಿಯದ್ – ಮೋಂಟ ನೀ ಒಮ್ಮೆ ಬೇಗ ಹೋಗ್. ತಡ ಮಾಡಿರೆ ನಿನ್ನ ಆ ಹಾರ್‍ತಿಯ ಒಡೆ ಕಾಯುದು ಅಲ್ಲಿ.

**ಮೊಂಟ** : *(ಏಳುತ್ತ)* ಆದು ಅಜ್ಜಪ ಹೋನೆ. ಅಲ್ಲಿ ಕಾದವೆಯೋ ಏನೊ. ಊಟಕ್ಕೆ ಆಕನ.

**ಶಿವಮ್ಮ** : ಹೋಗ್ – ವಡೆ ತಿಂದ್ ಮೊದ್ವೆ ಆಕೆ ಮರೀಬೇಡ ಮತ್ತೆ.

**ಮೋಂಟ** : ಇಲ್ಲೆ ಅಜ್ಜಪ. ನಾಡ್ದ್ ಭಟ್ರ ಸಾರ್ದ ಒಂದು ಮುಗಿಯಲಿ. ಮತ್ತೆ ನಾ ಅತ್ತ ತಲೆ

ಹಾಕಿಕಿಲ್ಲೆ. ಅಜ್ಜಪ ಬನ್ನೆ – ನಾಡ್‌ದ್ ಮೋಯಿ ಲೈಟಿಗೆ ಆಗದೊ (*ಉರುಳಿಯನ್ನು ಎತ್ತಿ ಹೆಗಲಿಗಿಟ್ಟು ಹೋಗುವನು. ತುಸುಹೊತ್ತಲ್ಲಿ ನಂಜನ ಪದ ಕೇಳಿಬರುತ್ತದೆ)* **ಅಡವಿ ಮರಗಿಡಬಳ್ಳಿ । ಅರಸಿನದ ಹುಡಿಯಂತೆ । ತೋರುತಿದೆ ತಮ್ಮಾ.**

**ನಾಗಪ್ಪ** : ಹ್ಞಂ – ಬಾತ್‌ಂತ ಕಂಡದೆ ಹೈದ – ಪದ ಕೇಳ್ದೆ ನೋಡು – ಈ ನಿದ್ದೆಗೆಟ್ಟ್ ಹೂಟೆ ಮಾಡಿ ಬಿಸಿಲೇರ್ಕನ ಅರಸಿನ ಹುಡಿನಾಂಗೆ ಯಾರಿಗೂ ಕಂಡದೆ. ಪಾಪ ಹೊಟ್ಟೆಸಿರೊಕು. ಬೇಗ ಇಕ್ಕ್ ಅವಂಗೆ. ನಾ ಬೇಗ ಬನ್ನೆ (*ಮೊದಲಿನಂತೆ ಕೋವಿ ಹೆಗಲಿಗೇರಿಸಿಕೊಂಡು ಹೊಗುವನು)*

**ನಂಜ** : (*ಪ್ರವೇಶಿಸುತ್ತಾ)* ಅವ್ವಾ – **ಭಿಕ್ಷೆಯನೀಡೆ ದೇವಿ । ಸನ್ಯಾಸಿಗೆ । ಭಿಕ್ಷೆಯ ನೀಡೆ ದೇವಿ.** ಹೊತ್ತಾತ್. ಭಾರಿ ಹೊಟ್ಟೆಸಿದೆ.

**ಶಿವಮ್ಮ** : ಎಂಥಾ ಪದಯ ಮಂಜ ! ಬಾ ಕೈಕಾಲ್ ತೊಳ್ದ್ ಬಾ. ಇಕ್ಕಿನೆ. ನೀ ಬಾವಷ್ಟರ್ಲಿ ನಾಯಿಗೂ ಗಂಜಿ ತೆಳಿ ಹೊಯ್ದ್ ಬನ್ನೆ. ಹೊತ್ತು ಮೀರ್ತ್.

**ನಂಜ** : ಆದವ್ವ. **ಲೇಸಾಯಿತಯ್ಯಾ ಸನ್ಯಾಸಿ । ನಿಮ್ಮ ಚರಣಕ್ಕೆ । ಸಾಸಿರ ಶರಣೆಂಬೆನು** (*ಬಟ್ಟೆಯಲ್ಲಿ ಸುತ್ತಿದ ಜೋಡನ್ನು ಒಂದು ಮೂಲೆಯಲ್ಲಿಟ್ಟು ಬರುವಷ್ಟರಲ್ಲಿ ಶಿವಮ್ಮ ನಾಯಿಗೆ ಗಂಜಿ ಹಾಕಿ ಬಟ್ಟಲು ಹಿಡಿದುಕೊಂಡು ಬರುತ್ತಾ ಆಶ್ಚರ್ಯದಿಂದ)*

**ಶಿವಮ್ಮ** : ಹೌದಾನೆ ಮಂಜ. ನೀ ಇಂದ್ ಜೋಡು ಹಾಕ್ಕೊಂಡು ಹೋತಿಲ್ಲೆನೆ. ನಿನ್ನ ಒಂದು ಜೋಡು ನಾಯಿಗೂಟದ ಹಕ್ಕಲೆ ಉಟ್ಟು. ಹೌದು. ನಿನ್ನದೆ ಕಂಡದೆ. ನಮ್ಮ ಬೊಳ್ಳು ಕಚ್ಚಿಕೊಂಡು ತಂದಿರೊಕು. ಪುಣ್ಯಕ್ಕೆ ಕಚ್ಚಿ ತುಂಡು ಮಾಡ್ತ್‌ಲ್ಲೆಂತ ಕಂಡದೆ.

**ನಂಜ** : (*ಅತ್ಯಾನಂದದಿಂದ ಏರು ದನಿಯಲ್ಲಿ)* **ಭಳಿರೇ ಮೆಚ್ಚಿದೆ ಕೇಳು.** ಅವ್ವಾ ! ಅದು ನನ್ನದೇ ಜೋಡು. ಅಲ್ಲಿ ಉಟ್ಟೊ.

**ಶಿವಮ್ಮ** : ಹೌದ್ನೆ ನಿನ್ನದೇಂತ ಕಂಡದೆ. ಅದರ ಜತೆ ಇನ್ನೊಂದು ಎಲ್ಲಿಟ್ಟು ? ಈ ಹಡಬೆ ನಾಯಿ ಬೇರೆಲ್ಲಾದರೂ ಕಚ್ಚಿಕೊಂಡು ಹೋಗುಟ್ಟೋ.

**ನಂಜ** : ಇಲ್ಲೆವ್ವಾ ಇಲ್ಲಿಟ್ಟು (ಬಟ್ಟೆಯಲ್ಲಿ ಸುತ್ತಿರುವುದನ್ನು ಎತ್ತಿ ತೋರಿಸಿ) ಅದ್ ಇದರ ಜತೆನೆ. ಎಲ್ಲಿಟ್ಟು ತಂಬ ಇಲ್ಲಿ. ಬೇಡ ನಾನೇ ಬನ್ನೆ. (*ಹೋಗಿ ತೆಗೆದುಕೊಂಡು)* **ಸಿಕ್ಕಿತು ಎನಗೊಂದು ತಿನಿಸು.** ಬಚಾವ್ (*ಎರಡು ಚಪ್ಪಲಿಗಳನ್ನು ಹಿಡಿದು ಹತ್ತಿರ ತಂದು)* ಅವ್ವಾ ! ಇದೇ ಇದೇ ನನ್ನದೇ ನೋಡ್ ಎಂಥ ಜೋಡ್. **ರತಿದೇವಿಗೆಣೆ ನಾನು । ಮನುಮಥ ನೀನು.** ನಾ ಇದರ ಎಷ್ಟು ಹುಡುಕ್ಕೊಳೆ ಗೊತ್ತುಟ್ಟಾ. ರಾತ್ರೆ ಸಾಲೆಗೆ ತಾಳಮದ್ದಳೆಗೆ ನನ್ನೊಟ್ಟಿಗೆ ಬಂದ ಬೊಳ್ಳು ನನ್ನಿಂದ ಮೊದಲೇ ಹೊರಟ್ ಇದರ ಕಚ್ಚಿಕಂಡ್ ತಂದ್ ಇಲ್ಲಿ ಹಾಕುಟ್ಟು. (*ಪರೀಕ್ಷಿಸಿ ನೋಡಿ)* ಏನ್ ಹಾಳ್ ಮಾಡ್‌ತ್‌ಲ್ಲೆ – ಒಳ್ಳೆ ಬುದ್ಧಿ ನಾಯಿ. ಬಾಲ ಆಡಿಸಿ ತೆಳಿ ನೆಕ್ಕಿದೆ ನೋಡ್. ಅವ್ವಾ ! ಅದಕ್ಕೆ ಇನ್ನ್ ಒಂದೀಸ್ ತೆಳಿ ಹೊಯ್ದ್ ಒಂದ್ ಉಪ್ಪಣ ತುಂಡ್ ಹಾಕ್.

**ಶಿವಮ್ಮ** : ಅದಕ್ಕೆ ಹಾಕಿನೆ. ನೀ ಮುಂದೆ ಉಣ್ಣು ಗಡ – ನಿದ್ದೆಗೆಟ್ಟ್ ಬಾರೀ ಬಚ್ಚೊಳ – ಅದರ ಮೇಲೆ ಮಾತ್ಮಾತಿಗೆ ಪದ ಬೇರೆ. ನಿನ್ನ ತಾಳಮದ್ದಳೆ ಪದ ಒಸಿ ಕಡ್ಮೆ ಮಾಡ್.

ನಂಜ : ಆದವ್ವಾ. ಆದರೆ ನನ್ನ ಗುರು ಮಂಜಣ್ಣ ಒಳೊಲೆ. ಅವರ ಬುಡುಕಾದೆನೊ ಹೇಳ್. ಅವ್ರು ಹೇಳ್ದ ಪದಗ ನನ್ನ ಬಾಯ್ಗೆ ಬಂದದೆ. ಅವ್ರು ಕಾಲ್ತೆಗ್ದಾಂಗೆ ತೆಗಿಕೆ ಇನ್ನ್ ಕಲಿಯೊಕಷ್ಟೆ – ಹೋಗಲಿ. ನಮ್ಮ ಚಿನ್ನು ಎಲ್ಲಿ ಹೋಗುಟ್ಟು.

**ಶಿವಮ್ಮ** : ಕಾಗಡೆಮನೆ ನೀಲು ಬಂದುಟು ಗಡ. ಅದ್ ಸೋಬಾನೆ ಹೇಳಿಕೆ ಕಲ್ಸಿನೆಂತ ಬಾಕೆ ಹೇಳಿಟ್ಟು ಗಡ. ಅಲ್ಲಿ ಹೋಗುಟ್ಟು.

**ನಂಜ** : ಎಂಥ ! ಸೋಬಾನೆ ? ಈಗಿನ ಕಾಲಲಿ ಸೋಬಾನೆ ಹೇಳಿಕಂಡ್ ಯಾರ್ ಕುದ್ದವೆ. ಈಗ ಗೂಡೆಗ ಯಕ್ಷಗಾನ ಪದ ಕಲಿಯೋಕು, ಬಾಗವತರಾಕು. **ಗಜಮುಖದವಗೆ ಗಣಪಗೆ.** ಅಂತ ಜಾಗಟೆ ಹಿಡಿಯೋಕು.

**ಶಿವಮ್ಮ** : ಅದಿಕ್ಕೆ ಪದ ಹೇಳಿಕೆ ನೀನೇ ಕಲ್ಸೊಕಷ್ಟೆ.

**ನಂಜ** : ನಾ ಅಲ್ಲ – ನಮ್ಮ ತಿಮ್ಮಪ್ಪ ಮಾಸ್ಟ್ರ ಕಲ್ಸೊಕು. ಅವರ ಐತಾರ ಐತಾರ ಮನೆಗೆ ಬಾಕೆ ಹೇಳೊಕು. ಹಗಲ್ ಬಂದ್ ಒಂದೊತ್ತು ಹೇಳಿ ಕೊಟ್ಟರೆ ಆದೆ.

**ಶಿವಮ್ಮ** : ನಿನ್ನಪ್ಪ ಒಪ್ಪೊಕಲೆ. ಅವ್ರು ಇದ್ದರೆ ಗೂಡೆ ಬಾಯಿ ಬುಡದ್. ಅವರ ಎದ್ರ್ ನಿನ್ನ ಬಾಯೇ ಬಂದ್ ಆದೆ.

**ನಂಜ** : ಅದಿಕ್ಕೆ ಹೀಂಗೆ ಮಾಡೊಮೊ. ಅವರ ಎದುರ್ ಬೇಡ. ಅವರ ಆ ಹೊತ್ತ್ ಕೋವಿ ಹಿಡ್ಕಂಡ್ ಕಾಡಿಗೆ ಹೋಕೆ ಹೇಳಿರೆ ಆತ್. ಹೋದವೆ. ಮಾಸ್ಟ್ರ ಇಲ್ಲಿ ಬಂದ್ ಪಾಠ ಮಾಡಲಿ ಅವ್ವಾ! **ಲಾಲಿಸಿ ಕೇಳೆನ್ನ ಮಾತ.**

**ಶಿವಮ್ಮ** : ಂದಾ ಯಾವ್ದಕ್ಕೂ ನೀ ಮುಂದೆ ಉಣ್ಣು ಗಡ. ಬಾ ಇಕ್ಕಿನೆ. ಪದ ಮತ್ತೆ, ನಾ ಅದಕ್ಕೆ ಅರ್ಥ ಹೇಳ್ನೆ ಬಾ. *(ಒಳಗೆ ಹೋಗುವಳು)*

ನಂಜ : ಆದವ್ವ. **ಆಯಿತು ಸೇತು ಕಟ್ಟೆ ರಾಜೇಂದ್ರ । ವಾಯುನಂದನ ತಂದ.** ಬನ್ನೆ ಬನ್ನೆ. *(ಒಳಹೋಗುತ್ತಾ)* **ರಾವಣನು ಸನ್ಯಾಸಿ ವೇಶವ ತಾಳಿ ಬಂದ ।** *(ಎನ್ನುತ್ತಾ ಒಳಹೋಗುವನು)*

# ಬೊಳ್ಪಾಕನ ಮುಗ್ತ್

3

*(ಬಯಲದಾರಿಯಲ್ಲಿ ಸಿಟ್ಟು ನಿರಾಶೆ ಆತಂಕಗೊಂಡವನಂತೆ ರಾಂಪನ ಪ್ರವೇಶ)*

**ರಾಂಪ** : *(ಬಾಯಲ್ಲಿ ಇರುವುದನ್ನು ಉಗುಳುತ್ತಾ)* ಥೂ.. ಯಾರ್ದ್ ಈ ಕೆಲ್ಸ. ಹಡಬೆ ಬೇವಾರ್ಸಿಗ. ಯಾರ್‌ಂತ ನೋಡ್ನೆ *(ಮುಂದಾಗುವನು)*

**ಸೋಂಪ** : *(ತುಸು ತಡೆದು ಪ್ರವೇಶಿಸುತ್ತ ರಾಂಪನು ನಡೆದತ್ತ ದೂರಕ್ಕೆ ನೋಡಿ)* ಯಾರದ್? – ಒಬ್ಬನೆ ಮಾತಾಡಿಕಂಡ್ ಹೋದು. ಹೋ, ! ಇದ್ ನಮ್ಮ ರಾಂಪ ಬಾವ. ತಲೆಗೆ ಸುತ್ತಿದ ಬೈರಾಸ್ ಮಾತ್ರ ಕಂಡದೆ *(ಕೈ ತಟ್ಟಿ ಕರೆಯುತ್ತ)* ಓ ಹೋಯ್ – ಇಂದನಿ ಬಾವ ! ನಿಲ್ಲ್‌ಯಾ, ಸಾನೂ ಬನ್ನೆ. ಒಟ್ಟಿಗೆ ಪೋಯಿ *(ಅರ್ಧ ಮರೆಯಾಗಿದ್ದ ರಾಂಪ ಮತ್ತೆ ಹಿಂದಕ್ಕೆ ಕಾಣಿಸಿಕೊಂಡು)*

**ರಾಂಪ** : ಏನಿಯಾ ಸೋಂಪ ? ಎತ್ತಂದ ? ದೂರ ಹೋಗಿದ್ದ.

**ಸೋಂಪ** : *(ಬಳಿಗೆ ಸಾರಿ)* ಅದ್ ಹೇಳ್ನೆ – ನೀವ್ಯಾಕೆ ಒಬ್ಬರೇ ಮಾತಾಡಿಕಂಡ್ ಹೋಕು. ನಾ ಒಳೆ. ಇಬ್ಬರ್ ನಡೇಕೆ ಹಗುರಾದೆ.

**ರಾಂಪ** : ಹೌದ್ – ಹಿಂದೆ ಯಾರೊ ಒಬ್ಬ ಪೆದ್ದ ಹೇಳ್ತ್‌ಗಡ – ಹತ್ತ್ ಮೈಲ್ ಒಬ್ಬನೆ ನಡಿವ ಬದ್ಲ್ ಇಬ್ಬರಿದ್ದರೆ ಐದೈದ್ ಮೈಲಾದೆಂತ. ದೂರ ಅರ್ಧಾವುದು ಇರಲಿ. ಅರ್ಧ ದಾರಿಲಿ ನೀ ಒಬ್ಬ ಮಾತಿಗೆ ಸಿಕ್ಕೊಳ – ಮಾತಾಡಿಕಂಡೇ ಪೋಯಿ. ಈಗ ಹೇಳ್ ಎಲ್ಲಿ ಹೋಗಿದ್ದ ?

**ಸೋಂಪ** : ಅದ್ ಹೇಳ್ನೆ ಬಾವ – ನೀವು ದೊಡ್ಡವು ನಿಮ್ಮಲ್ಲಿ ಹೇಳದೆ ಮತ್ಯಾರೊಟ್ಟಿಗೆ ಹೇಳುದು ಹೇಳಿ. ಅಲ್ಲ – ನೀವು ಯಾರ್‍ನೋ ಬೈಕಂಡ್ ಹೋದಂಗೆ ಕೇಳ್ತ್ ಯಾರಂವ?

**ರಾಂಪ** : ಥತ್ – ಯಾರ್‌ಂತ ಗೊತ್ತಾದರೆ ಹಿಡ್ದ್ ಅವನ ಬಾಯಿಗೇ ಮಾಡ್ತಿದ್ದೆ. ಕಳ್ಳ ಹಡಬೆ ಮೋಲಿ. ಆ ಚಾಳೆ ಬುಡಲಿ ನಂಗೆಂತ ಬೆಳ್ಚ ಇಸಿದ ಕುದ್ಪೆ ಇಂದ್ ಖಾಲಿ.

**ಸೋಂಪ** : ಏನಾತ್? ಇಂದ್ ಇಸಿತಿಲ್ಲೆನಾ ? ಅಲ್ಲ ಅಂವ ಇಸಿದರ ಯಾರಾರ್ ಕುಡ್ದೊಳೊ ಹೇಂಗೆ.

**ರಾಂಪ** : ಕುಡ್ದದ್ ಮಾತ್ರ ಅಲ್ಲಯ – ಅದರ್ಲಿ ಹೊಯ್ದ್ ತುಂಬ್ಸಿ ಇಸ್ಯೊಳೊ. ದಿನಾ ನಾ ಕುಡಿವವ ಅದರ ಸರಿ ನೋಡದೆ ಕುದ್ಪೆ ಬಾಯ್ಗಿಸ್‌ಕನ ಥೂ – ಉಪ್ಪುಪ್ಪು *(ಮತ್ತೊಮ್ಮೆ ಕ್ಯಾಕರಿಸಿ ಉಗಿಯುವನು)*

**ಸೋಂಪ** : *(ತಾನೂ ಮುಖ ಸಿಂಡರಿಸಿಕೊಂಡು)* ಛೀ ಛೀ ಇದ್ ಕುರೆಗಳದ್ದೇ ಕೆಲ್ಸ ಇರೋಕು. ಈಗ ನಮ್ಮ ಕಾನಕ್ಕೆ ಒಂದ್ ಹೊಸ ಮುಚ್ಚ ಬಂದುಟ್ಟು ಗಡ. ಅದ್.. ಹೆಂಡ ಕುಡ್ದದೆ ಗಡ.

**ರಾಂಪ** : ಸಾಕ್ ನಿನ್ನ ಗಡಗಡ. ಇದ್ ಕಾನದ ಮುಚ್ಚ ಅಲ್ಲಯ – ದನ ಮೇಪತ್ತರ ಕೆಲ್ಸ ಇರೋಕು – ಕಲ್ಸಿನೆ ಅವುಕ್ಕೆ.

**ಸೋಂಪ** : ಇರ್ದು – ಆ ನಮ್ಮ ಸಾಲೆಲಿ ತಾಳಮದ್ದಳೆ ನಡ್ದದಲೆ – ಅವರ ನಂಬಿಕೆ ಆದುಲ್ಲೆ.

**ರಾಂಪ** : ಯಾರೂ ಇರಲಿ. ಅದರ ಪಲ ಅವು ತಿನ್ನೊಕು. ಪಿಲಿಚಾಮುಂಡಿಗೆ ಹರ್ಕೆ ಹೇಳ್ನೆ – ಅದೇ ನೋಡಿಕಂಡದೆ.

**ಸೋಂಪ** : ಅದ್ ಸರಿ ಬಾವ – ಅಂತವು ಇರಿಕಾಗದ್. ಹಾಂಗೆ ಮಾಡಿ.

**ರಾಂಪ** : ಅದ್ ಇರ್ಲಿ – ನೀ ಎಲ್ಲಿ ಹೋಗಿದ್ದ ಈ ಬೊಳ್ಪಿಗೆ.

**ಸೋಂಪ** : ಅದ್ ಹೇಳ್ನೆ ಬಾವ – ನಿಮ್ಮಲ್ಲಿ ಹೇಳದೆ. ಆದರೆ ನಿವ್‌ಗೊಂದು ಮಾತ್ ಹೇಳ್ನೆ. ನಾಳೆಂದ ನೀವು ಅವ ಮೂರ್ತೆ ಮಾಡಿ ಕೆಳಗಿಳಿವ ಹೊತ್ತಿಗೇ ಬರೋಕು. ತಡಮಾಡಿಕಾಗದ್.

**ರಾಂಪ** : ಇಲ್ಲೆಯಾ.. ನಾ ಹೊತ್ತಿಗೆ ಸರಿಯಾಗೇ ಬಾತಿದ್ದೆ. ಇಂದ್ ಮಾತ್ರ ತಡಾತ್. ಆ ಕೇಪಣ್ಣನ ಹಕ್ಕಲೆ ಎಂಣೆ ತಾಕೆ ಹೋಗಿದ್ದ್ ಬಾಕನ ತಡಾತ್.

**ಸೋಂಪ** : ಯಾರಿಗೆ ಬಾವ ಎಂಣೆ? ಹೂಟೆ ಎತ್ತಿಗೆ ಏನಾರ್...

**ರಾಂಪ** : ಎತ್ತಿಗಲ್ಲಯ – ಮಂಜಂಗೆ. ನಿಂಗೆ ಗೊತ್ತಿಲ್ಲೆಂತ ಕಂಡದೆ.

**ಸೋಂಪ** : ಇಲ್ಲೆಪ್ಪ. ಏನಾಗುಟ್ಟು ಅವಂಗೆ – ಕಂಬಳಲಿ ಕೋಣ ಓಡ್ಸಿಕನ ಕಾಲ್ ಉಳುಕಿಟ್ಟೊ ಹೇಂಗೆ.

**ರಾಂಪ** : ಕಾಲ್ ಅಲ್ಲಯ ಸೊಂಟ. ಕಂಬಳಂದ ಅವಂಗೆ ಈಗ ಆಟದ ಹುಚ್ಚು ಹೆಚ್ಚಾಗುಟ್ಟು. ನಮ್ಮ ಊರ್ನ ಮೇಳ ಉಟ್ಟಲೆ. ಅದರ್ಲಿ ಇವಂಗೆ ಸರಿ ಅರ್ಥ ಹೇಳಿಕೆ ಬಾವುದಿಲ್ಲೆಂತ ಬಣ್ಣದ ವೇಸ– ತಡ್ಪೆ ಕಿರೀಟ ಇಸಿ ಅಟ್ಟಾಸ ಕೊಡುದು.

**ಸೋಂಪ** : ಆ ಕಿರೀಟ ಇಸಿದ್ ಕೊಣೆಕನ ಗಂಟ್ಲ್ ಉಳ್ಕದೆ ಇರುದೊ.

**ರಾಂಪ** : ಗಂಟ್ಲ್ ಅಲ್ಲಯ ಸೊಂಟ – ಪುಣ್ಯಕ್ಕೆ ಮುಚ್ಚಂಡೆ ಮುರಿಯದ್ದ್ ಪುಣ್ಯಾ.

**ಸೋಂಪ** : ಛೆ ಛೆ – ಎಲ್ಲಿ ಏನಾತ್ ಬಾವ ?

**ರಾಂಪ** : ಮೊನ್ನೆ ಬಜಪಿಲಲಿ. ಇವರ ಆಟ ಆತಲೆ ? ಅಲ್ಲಿ. ದೇವಸ್ಥಾನದ ಹಳೆ ಗೋಮರಲಿ ಆಟದ ಚೌಕಿ. ರಂಗಸ್ಥಳ ದೇವಸ್ಥಾನದ ಎದ್‌ರ್ ದೂರದ ಮಜಲ್‌ಲಿ. ಇವ ರಾತ್ರೆ ವೇಸ ಹಾಕಿ ರಂಗಸ್ಥಳಕ್ಕೆ ಹೋಕನ

**ಸೋಂಪ** : ಏನಾತ್ !?

**ರಾಂಪ** : ಏನಾತ್‌ಂತ ಕೇಳ್. ಇವನ ವೇಸ ನೋಡಿಕೆ ನಾ ಆದಿನ ಆಟಕ್ಕೆ ಹೋಗಿದ್ದೆ. ಪರಸ್ಥಳ – ಸರಿ ಜಾಗ ದಾರಿ ಗೊತ್ತಿಲ್ಲೆ – ಕಟ್ಟಮಣಿ ಬುಟ್ಟು ಬೇಸಿಗೆಲಿ ಮಜಲ್‌ಲಿ ರಂಗಸ್ಥಳಕ್ಕೆ ಹೋಕೆ ಸರ್ತ ದಾರಿ. ಅಂದ್ ಏನೊ ಭಾರೀ ಪ್ರಸಂಗ. ಇವಂಗೆ ನಡೀರ್‍ಲ್ ಕಳ್ದ್ ಬಾವ ಪಾತಾಳ ಮೈರಾವಣನ ವೇಸ. ರಂಗಸ್ಥಳಲಿ ಭಾಗವತರ್ ಮೈರಾವಣ ಬಾಕೆ ಪದ ಎತ್ತಿದೊ. ಚೆಂಡೆ ಮದ್ಲೆ ಜೋರಾಗಿ ಬಡ್ದೊ. ವೇಸ ಮುಗ್ಸಿ ಮಂಜ ಮೈರಾವಣ ಚೌಕಿಂದ ಒಂದ್ ಅಟ್ಟಾಸ ಕೊಟ್ಟತ್. ಅದಕ್ಕೆ ರಂಗಸ್ಥಳ ಗಡಗಡ ನಡ್ಗಿತ್‌ಂತ. ಮನ್‌ಗಿದವು ಎದ್ದ್ ಕುದ್ದೊ – ದೂಂಗುತ್ತಿದ್ದವ್ಕೆ ಎಚ್ಚರಾತ್. ರಂಗಸ್ಥಳಕ್ಕೆ ಹಕ್ಕಲೆ ಆ ಎರಡ್ನೇ ಅಟ್ಟಾಸ ಕೇಳ್ತ್. ಚೆಂಡೆ ಮದ್ದಳೆ ಜತೆಗೆ ಒಂದೆರಡ್ ಗರ್ನಾಲ್ ಹೊಡ್ದೊ. ಆಟ ರೈಸೊಕಲ್ಲೊ? ವೇಸಕ್ಕೆ ತೆರೆಹಿಡ್ದ್ ದೀಟಿಕೆ ತಂದೊ – ಮಕ್ಕ ಎಲ್ಲ ಮೈರಾವಣನ ನೋಡಿಕೆ ಎದ್ದ್ ನಿಂತೊ – ಈಗ ಬಂದದೆ ಈಗ ಬಂದದೆಂತ ಕಾದೊ – ತೆರೆ ಹಿಂದೆ ನಿಂತ್ ಮೂರನೆ ಆಟ್ಟಾಸ ಕೇಳ್ತ್‌ಲ್ಲೆ – ಕಾದೊ ಕಾದೊ. ಜಾಗಟೆ ಮದ್ದಳೆ ಚೆಂಡೆ ಏರ್ತೆ ಕಡಿಮೆ ಆತ್ – ಗೇಸ್‌ಲೈಟ್ ಹಿಡ್ಕಂಡ್ ಕೆಲಜನ ಚೌಕಿಯತ್ತ ಹೋದೊ – ಸ್ವಲ್ಪ ಹೊತ್ತಾಕನ ಜನ ಎಲ್ಲ ಓಡ್‌ದೊ. ಹೋಗಿ ನೋಡ್ಕನ ಎಂತದ್ ! ವೇಸ ಹಾಕಿದ ಮಂಜ ಮೈರಾವಣ ಮಜಲ ಮಧ್ಯದ ದೇವಸ್ಥಾನದ ಬಾಮಿಲಿ. ಪುಣ್ಯಕ್ಕೆ ಬಾಮಿಲಿ ನೀರಿತ್ತಿಲ್ಲೆ. ಕೆಸರ್ ಮಾತ್ರ. ಊರವೆಲ್ಲ ಹಗ್ಗ ಕೇರ್ಪು ತಂದ್ ಬಾಮಿಗಿಳ್ದ್ ಮೈರಾವಣನ ಮೇಲೆತ್ತಿದೊ.

**ಸೋಂಪ** : ಬಚಾವು – ಜೀವಕ್ಕೆ ಬಾರದ್ದ್ ಪುಣ್ಯ.

**ರಾಂಪ** : ಪುಣ್ಯಕ್ಕೆ ದೊಡ್ಡ ಪೆಟ್ಟಾತ್‌ಲ್ಲೆ – ಸೊಂಟಕ್ಕೆ ಮಾತ್ರ.

**ಸೋಂಪ** : ಮುಚ್ಚಂಡೆ ಮುರ್ದಿದ್ದರೆ – ಪಾಪ. ಆ ಬಾಮಿಗೆ ಕಟ್ಟೆ ಇತ್ತಿಲ್ಲೆನೊ ಬಾವ.

**ರಾಂಪ** : ಇಲ್ಲೆಯಾ – ದೇವ್ರಿಗೆ ಕುದ್ರಿಕೆ ಕಟ್ಟೆ ಕಟ್ಸದ ಊರವು ಬಾಮಿಗೆ ಕಟ್ಟೆ ಕಟ್ಸಿವೆನೊ. ಎಲ್ಲ ದೇವರ ಆಟ ನೋಡ್ ! ಏನ್ ಆತ್‌ಲ್ಲೆ. ಅವನ ಮೆಲ್ಲಗೆ ನಡ್ಸಿಕಂಡ್ ಚೌಕಿಗೆ ತಂದೊ.

**ಸೋಪ** : ಮತ್ತೆ ಆಟ ನಿಂತತ್.

**ರಾಂಪ** : ನಿಲ್ಲದೆ ಇಷ್ಟೆಲ್ಲ ಆಕನ ಬೊಳ್ಪಾತ್. ಅರ್ಧಲೇ ಆಟ ಮುಗ್ತ್.

**ಸೋಂಪ** : ಛೇ – ನಂಗೆ ಗೊತ್ತೇ ಇಲ್ಲೆ. ಹೈದ ಅಪ್ಪಯ ಹೇಂಗುಟ್ಟೇಗ – ಸರಿ ನಡ್ದದೆಲ್ಲ ?

**ರಾಂಪ** : ಎರಡ್ವಾರ ಕಳ್ತಲೆ. ಟೊಂಕ ಹಾಕಿದೆ – ಏನ್ ಊನ ಬಾರದ್.

**ಸೋಂಪ** : ಅಷ್ಟಾದರೆ ಸಾಕ್. ನಮ್ಮ ಕೇಪಣ್ಣನ ಎಂಣೆ ಅಂದರೆ ಕೇಳೊಕೊ. ಅವನ ಸೊಪ್ಪು ಲೇಪ ಪಾಕಿರೆ – ದಿನಾ ಎಂಣೆ ತಿಕ್ಕಿರೆ ಮುರ್ದದ್ ಸಾ ಕೂಡಿದೆ.

**ರಾಂಪ** : ಹಾಂಗೆ ಎಂಣೆ ಮುಗ್ದುಟ್ಟೊಂತ ತಾಕೆ ಹೋದಂವ ಬಾಕನ ತಡ ಆತ್. ಇಲ್ಲಿ ಕತೆ ಹೀಂಗಾತ್. ಸರಿ – ನೀ ಎಲ್ಲಿ ಹೋಗಿದ್ದ ? ಹೇಳ್ನೆ ಹೇಳ್ನೇಂತ ಹೇಳಿಕೆ ಜಾರಿಯಾ – ಬಾರಿ ಗುಟ್ಟುಂತ ಕಂಡದೆ.

**ಸೋಂಪ** : ಇಲ್ಲೆ ಬಾವ. ಅಂತ ಗುಟ್ಟುನದ್ ಏನಿಲ್ಲೆ. ನಿಮ್ಮಲ್ಲಿ ಹೇಳದೆ ಮತ್ಯಾರಲ್ಲಿ ಹೇಳುದು. ನಾ ಜೋಗಿಬೆಟ್ಟ್ ಜೋಯಿಸರ್ಲಿ ಹೋದಂವ ಈಗ ಬಾವುದಷ್ಟೆ.

**ರಾಂಪ** : ಬೇಗ ಬೊಳ್ಪಿಗೇ ಹೋಗೊಳಂತ ಕಂಡದೆ.

**ಸೋಂಪ** : ಹೌದು – ಬೊಳ್ಪಾಕೆ ಮುಂದೆನೇ ಜೋಗಿಬೆಟ್ಟಿಗೆ ಮುಟ್ಯೊಳೆ. ತಡ ಆದರೆ ಅವು ಸಿಕ್ಕುದುಲ್ಲೆ. ಬಲ್ಮೆ ಜಾತಕಂತ ಬಾರಿ ಜನ ಬಂದವೆ. ಕೆಲವು ಮನೆಗೆ ಸ್ಥಳ ನೋಡಿಕೆ – ಕುಟ್ಟಿ ಹಾಕ್ಸಿಕೆ ಕರ್‍ಕಂಡು ಹೋದವೆ.

**ರಾಂಪ** : ಹೋಗಲಿ. ಹೋದ ಕೆಲ್ಸ ಏನಾತ್. ನಿಂತೇ ಮಾತಾಡಿ ಕಾಲ್ ಬಚ್ಚಿದೆ – ಬಾ ಅಲ್ಲಿ ಅಜ್ಜಿಕಲ್ಲ್ ಉಟ್ಟಲೆ. ಅದರ ಹಕ್ಕಲೆ ಕುದ್ರುಮೊ.

**ಸೋಂಪ** : ಆದು ಬಾವ ನಂಗೂ ಬಚ್ಚಿದೆ ಮೋಯಿ *(ಮರೆಯಾಗಿ ಅಜ್ಜಿಕಲ್ಲಿನ ಬಳಿ ಬರುವರು)*

**ರಾಂಪ** : ಬಾಯಿ ಸಪ್ಪೆ ಸಪ್ಪೆ ಅಲ್ಲ, ಉಪ್ಪುಪ್ಪಾದೆ. ನಿನ್ನ ವೀಳ್ಯ ಸಂಚಿ ಬಿಚ್ಚ್ ನೋಡುಮೊ – ನೀ ಜೋಯ್ಸ್ರಲ್ಲಿ ಹೋದಲ್ಲೊ – ನಿನ್ನೊಟ್ಟಿಗೆ ಎಲ್ಲಾ ಇರೊಕು.

**ಸೋಂಪ** : ಉಟ್ಟು ಬಾವ, ಕುದ್ರಿ.

**ರಾಂಪ** : *(ಮತ್ತೆ ಅತ್ತ ಕರೆದು)* ಬಾ ಇಲ್ಲಿ ಕುದ್ರು. ಅದ್ ಅಜ್ಜಿಕಲ್ಲ್. ಅದ್ರ ಮೇಲೆ ಕುದ್ರಿಕಾಗದ್ *(ಹತ್ತಿರದ ಎತ್ತರದ ಹಾಸುಗಲ್ಲಿನಲ್ಲಿ ಕುಳಿತು ವೀಳ್ಯ ತಿನ್ನುವುದರೊಂದಿಗೆ ಮಾತು ಮುಂದುವರಿಯುತ್ತದೆ)* ಆ ಅಜ್ಜಿಕಲ್ಲಿನ ಮೇಲೆ ಯಾರ್ ಕುದ್ರುದುಲ್ಲೆ. ಹಿಂದೆ ಅದ್ ಬಾರಿ ಕಾರ್ಣಿಕದ್. ಈಗ ಅದರ ಸತ್ಯ ಕಡಿಮೆಯಾಗುಟ್ಟು. ಊರ ದನಂಗ ಹಟ್ಟಿಗೆ ಬಾರದ್ದರೆ ದನ ಕರು ಹಾಕದ್ದರೆ – ಮನೆಲಿ ಹೆಮ್ಮಕ್ಕಳ ತಲೆಲಿ ಹೇನು ತುಂಬಿರೆ, ಮಕ್ಕಿಗೆ ಸೋಂಕು ಆದರೆ ಅಜ್ಜಿಕಲ್ಲಿಗೆ ಹರ್‍ಕೆ ಹೇಳಿ ಕಲ್ಲಿಗೆ ಹಿಡಿ ಸೊಪ್ಪು ಹಾಕ್ತಿದ್ರೊ.

**ಸೋಂಪ** : ಹೂ ಹಾಕುದು ಬುಟ್ಟು ಅಜ್ಜಿಕಲ್ಲಿಗೆ ಸೊಪ್ಪು ಯಾಕೆ ಹಾಕ್ವೆಂತ ? – ಈ ಅಜ್ಜಿ ಭೂತ ಯಾರ್ದ್. ಎಲ್ಲಿಂದ ಬಾತ್ ಭಾವ ?

**ರಾಂಪ** : ಕಲ್ಲ್ ಇಲ್ಲೇ ಇತ್ತ್. ಈ ಬೈಲ್‌ನ ಮೂಲೆಮನೆವು ಇಲ್ಲಿ ಅಜ್ಜಿ ಕಲ್ಲ್ಂತ ಇದರ ಮಾಡ್‌ದೊ. ಊರವು ಪರವೂರವು ಇದರ ನಂಬಿದೊ. ಇದರ ಮಾಡ್‌ದ್ದ್ ಹಿಂದೆ ಇದ್ದ ಆ ಮನೆ ಗೂಡೆ. ಅದ್ ಮೊದ್ವೆ ಆಗಿ ಗಂಡನ ಮನೆಗೆ ಬಾಕನ ತವರ್‌ಂದ ಅವಳ ಅಜ್ಜಿ ಕೊಲೆ ಒಟ್ಟಿಗೆ ಬಾತ್ ಗಡ. ಮನೆಗೆ ಹೋಗದೆ ಮನೆ ಹಕ್ಕಲೆ ಈ ಕಲ್ಲ್‌ಲಿ ನೆಲೆಯಾನೆಂತ ಮಳ್ಳಿನ ಮೈಲಿ ದರ್ಶನ ಬಂದ್ ಹೇಳ್ತ್ ಗಡ. ಹೀಂಗೆ ಮನೆಸೊಸೆ ಹೆಣ್ಣ್ ದಿನಾ ಅಜ್ಜಿಕಲ್ಲಿಗೆ ಹೋಗಿ ಸೊಪ್ಪು ಹಾಕಿಕೆ ಸುರುಮಾಡ್ತ್. ಅಜ್ಜಿಕಲ್ಲ್‌ನ ದಾರಿಲಿ ನಡೆವವು ಕಲ್ಲಿಗೆ ಸೊಪ್ಪು ಹಾಕದ್ದರೆ ಅಜ್ಜಿ ಭೂತ ದಾರಿ ತಪ್ಸಿದೆಂತ ನಂಬಿಕೆಲಿ

ಹೋವ ಬಾವ ಜನ ಎಲ್ಲ ಅಜ್ಜಿಕಲ್ಲಿಗೆ ಸೊಪ್ಪು ಹಾಕಿಕೆ ಶುರುಮಾಡ್ದೊ. ಸಂಜೆ ಆಕನ ದಿನಾ ಗಟ್ಟಿ ಒಂದು ಹೊರೆ ಸೊಪ್ಪು ಆತೀತ್. ಸೊಪ್ಪು ಹೆರೆಯದೆ ಅದರ್ನೇ ಹಟ್ಟಿಗೆ ತಾಕೆ ಆ ಗೂಡೆ ಸುರುಮಾಡ್ತ್.

**ಸೋಂಪ** : ಬಾರೀ ಲ್ಯಾಕುಟ್ಟು ಭಾವ ಅಜ್ಜಿಕಲ್ಲ್‌ನ ಕತೆ. ಅಜ್ಜಿಕೊಲೆ ಅಜ್ಜಿಭೂತ ಆತ್.

**ರಾಂಪ** : ಅಜ್ಜಿಕಲ್ಲ್‌ನ ಸತ್ಯ ಒಂದು ಕಾಲಲಿ ಹೆಚ್ಚಿತ್ತ್. ಈಗ ಕಡಿಮೆ ಆಗುಟನ್ಟೆ.

**ಸೋಂಪ** : ಎಲ್ಲಾ ಅಸ್ಟೆ. ಈಗನವು ಭೂತ ಪ್ರೇತ ದೈವ ದೇವರ್ ಕೊಲೆಂತ ಯಾರ್ ನಂಬುವೆಂತ ಹೇಳಿ. ಹಿಂದೆ ಇರ್‍ಲ್ ಬುಡಿ ಹಗಲ್ ಹೊತ್ತ್ ಈ ದಾರಿಲಿ ಒಬ್ಬರೇ ಹೋತ್ತಿದ್ದೊ?

**ರಾಂಪ** : ಹಿಂದೆ ಬಂಟಮಲೆನ ಬ್ರಹ್ಮರಕ್ಕಸನ ಭಾರೀ ಉಪದ್ರ ಇತ್ತ್. ಯಾರೋ ಮಂತ್ರವಾದಿನ ಕರ್‍ಸಿ ಅದರ ಬಂದ್ ಮಾಡ್ಸಿದ್ದ್ ಗಡ.

**ಸೋಂಪ** : ಒಂದು ಹೋಕನ ಮತ್ತೊಂದು ಬಂದದೆ. ಕಳ್ದ ವರ್ಷ ಹಗ್ಗ ಹಾಕ್ಕಂಡ್ ಸತ್ತ ರಾಮಕ್ಕ ಮತ್ತ್ ಸೋಮಣ್ಣ ಈಗ ರಾತ್ರೆ ಬೆಳ್ದಿಂಗಳಿಗೆ ಕೈಕೈ ಹಿಡ್ಕಂಡ್ ಬಂದವೆ ಗಡ.

**ರಾಂಪ** : ಯಾರ್ ಹೇಳ್ದ್‌ಯಾ ?

**ಸೋಂಪ** : ನೋಡ್ದವು ಹೇಳ್ವೆ ಬಾವ.

**ರಾಂಪ** : ಪೀಡೆ ಪಿಸಾಸಿಗಳಿಗೆ ಹೆದ್ರಿಕೆ ಆಗದಿಯಾ. ನಾವು ಹೆದ್ರಿರೆ ಅವು ಹೆದ್ರುಸುವೆ. ನಾವು ಹೆದ್ರಿಸಿರೆ ಅವು ಹೆದ್ರುವೆ.

**ಸೋಂಪ** : ಅಲ್ಲ ಬಾವ. ಅದ್ಕೆ ಒಂದು ಉಪಾಯ ಉಟ್ಟುಗಡ. ಕೊಲೆ ಹೆಣ್ಣಾದರೂ ಗಂಡಾದರೂ ಬಿಳಿ ಬಟ್ಟೆ ಹಾಕ್ಕಂಡ್ ಕಾಣ್ಸಿವೆ ಗಡ. ನಮ್ಮ ಹೆಸ್ರ್ ಹಿಡ್ದೇ ಮಾತಾಡ್ಸುವೆ ಗಡ. ಕೊಲೆ ನರಮನ್ಸರೊಂತ ತಿಳಿಕೆ ಮೊದಲು ಅದರ ಪಾದ ನೋಡೊಕು ಗಡ. ಕೊಲೆನ ಬೆರಳ್‌ಗ ಪಾದದ ಹಿಂದೆಗೆ – ಇದೆ ಲಕ್ಷಣ. ಅವು ಬಂದ್ ಮೊದಾಲ್ ವೀಳ್ಯ ತಿಂಬಕೆ ಕೇಳ್ವೆ ಗಡ. ವೀಳ್ಯ ಕೊಟ್ಟರೆ ಅಡಿಕೆ ಹೋಳ್‌ನ ನೆಲಕ್ಕೆ ಹಾಕಿ ಅದರ ಹೆಕ್ಕಿ ಕೊಡಿಕೆ ಕೇಳ್ವೆ ಗಡ. ಅವು ಹೇಳ್ದ ಹಾಂಗೆ ಹೆಕ್ಕಿಕೆ ನೆಲಕ್ಕೆ ಬಗ್ಗಿರೆ ಅವನ ಕತೆ ಮುಗ್ತ್. ಬಗ್ಗದೆ ಧೈರ್ಯಂದ ಇದಿರ್ ಬೆತ್ತಲೆ ನಿಲ್ಲೊಕು ಗಡ – ಹಾಂಗೆ ನಿಂತವರ ಮುಂದೆ ಅವು ನಿಲ್ಲುದುಲ್ಲೆ ಗಡ.

**ರಾಂಪ** : ಮುಗ್ತೊ ನಿನ್ನ ಗಡಗಡ. ನಿಂಗೆ ಇದರ ಯಾರ್ ಹೇಳ್ದ್‌ಯಾ ಸೋಂಪ ! – ಹಿಂಗೆ ನೀ ಮಾಡಿ ನೋಡ್ಯೋಳ ಹೆಂಗೆ ?

**ಸೋಂಪ** : ನಾ ನೋಡ್ತ್‌ಲ್ಲೆ. ಹೇಳುದರ ಕೇಳ್ಯೊಳೆ. ಕಳ್ದ ವರ್ಸ ನಮ್ಮ ಕಾಯರ ನಾರ್ಣಪ್ಪ ರಾತ್ರೆ ಒಬ್ಬನೇ ಹೋಕನ ನೀರಿಗೆ ಬಿದ್ದ್ ಸತ್ತ. ಆ ಲಚ್ಮಿ ಎದ್‌ರ್‌ಂದ ಬಾತ್ ಗಡ. ಬಿಳಿ ಸೀರೆ ಉಟ್ಟ್ ಬಿಚ್ಚಿದ ಕೂದಲ್ ಹಿಂದೆ ಪಾದವರೆಗೆ ಇಳಿತಿತ್ತ್ ಗಡ – ಪಾದ ತಿರ್‍ಗಿತ್ತ್. ಅವನ ಇದಿರೆ ನಿಂತ್ ಕೇಳ್ತ್. ಎಲ್ಲಿ ಹೊರ್‍ಟ್ಯೊಳರಿ ಬಾವ ? ಇಂದನಿ ತಿನ್ನಿಂತ ವೀಳ್ಯ ಕೊಟ್ಟತ್. ತಿಂಬಕನ ಅಡಿಕೆ ಹೋಳು ಕೆಳಗೆ ಹಾಕಿ ನಗಾಡ್ತ್ ಗಡ – ನಾರ್ಣಪ್ಪಂಗೆ ಪುಕುಪುಕು ಆದರೂ ಧೈರ್ಯ ಮಾಡಿ ಉಟ್ಟ ಬಟ್ಟೆ, ಕೋಮಣ ಎಲ್ಲ ಬಿಚ್ಚಿ ತಲೆಗೆ ಸುತ್ತಿ ಎತ್ತಿದ ದನಿಲಿ ಒಂದು ಯಕ್ಷಗಾನ ಪದ ಹೇಳಿಕಾಕನ ಲಚ್ಮಿ ಮಾಯ. ಆದರೆ –

ಅದರ ನೋಡಿ ಬಂದ ನಾರ್ಣಪ್ಪ ನಾಲ್ಕ್ ದಿನ ಜೊರಲಿ ಮಲಗಿದ್ದೇ ಮಲಗಿದ್ದ್.

**ರಾಂಪ** : ನೀ ಇಂದ್ ಇರ್ಲ್ ಜೋಯ್ಸ್ರಲ್ಲಿ ಹೋಕನ ಯಾದಾರ್ ಅಡ್ಡಬಾತ ಹೇಂಗೆ.

**ಸೋಂಪ** : ಹೌದ್ ಬಾವ. ಆ ನೆತ್ತಿ ಗುಡ್ಡೆಂದ ಇಳ್ದ್ ಬಾವ ದೊಡ್ಡ ಗುಳಿಗನ ಸೂಟೆ ದೂರಲಿ ಕಾಣ್ಸಿಕೆ ಸುರುವಾತ್ – ಸರಿ ಬೊಳ್ಪಾತ್‌ಲ್ಲೆ ಸೂಟೆ ನನ್ನ ಎದುರಿಗೇ ಹಕ್ಕಲೆ ಹಕ್ಕಲೆ ಬಾತಿತ್ತ್. ಚಳಿಯಿದ್ದರೂ ನನ್ನ ಮೈಯೊಮ್ಮೆ ಬೆವರ್ತ್. ನಾ ನನ್ನ ಕಲ್ಲುರ್ಟಿನ ನೆನ್ಸಿಕಂಡ್ ನೋಡ್ತಾ ಒಳೆ. ಸೂಟೆ ಹಿಡ್ಕಂಡ್ ಬಂದದ್ದ್ ಯಾರ್ ! ನಮ್ಮ ದೊಡ್ಡಪ ಬೈಲಿಗೆ ಹೂಟೆಗೆ ಬರೆವು. ಹಕ್ಕಲೆ ಬರ್ತಾ ನನ್ನ ಕಂಡ್ ಕೇಳ್ದೊ ಯಾರದ್‌ಂತ. ನಾ ಹೇಳ್ದೆ ನಾ ಸೋಂಪ ದೊಡ್ಡಪಾಂತ. ನಿಂತ್ ಮಾತಾಡಿ ಹೋದೊ. ಅವು ರಣ ಅಲ್ಲಂತ ಮತ್ತೆ ಖಂಡಿತ ಆತ್.

**ರಾಂಪ** : ರಣ ಅಲ್ಲಾದ್ದರೂ ಗುಳಿಗ ಸೂಟೆ ಕಂಡಾಂಗಾತ್ ಬುಡು – ಮತ್ತೇನಾತ್ ಜೋಯ್ಸ್ರಲ್ಲಿ ಹೋದ್ದ್.

**ಸೋಂಪ** : ಅದರ್ನೇ ಈಗ ಹೇಳ್ನೆ. ನಾ ಹೋಕನ ಜೋಯ್ಸರ್ ಎದ್ದ್ ಮೋರೆ ತೊಳಿತಿದ್ದವಷ್ಟೆ. ನಾ ಮಗನ ಜಾತಕ ತೋರ್ಸಿ ಬಲ್ಮೆ ಕೇಳಿಕೇಂತ ಹೋದ್.

**ರಾಂಪ** : ಮದ್ವೆ ವಿಚಾರ ಇರೊಕು.

**ಸೋಂಪ** : ಹೌದು ಬಾವ ಬಾರಿ ಸಮಯಂದ ಹುಡುಕ್ತಾ ಒಳೆ – ನಮ್ಮ ಗೂಡೆಗೆ ಒಂದು ಗಂಡ್ ಕೂಡಿ ಬಾವುದಿಲ್ಲೆಲೆ !

**ರಾಂಪ** : ಜೋಯಿಸರ್ ಏನ್ ಹೇಳ್ದೊ

**ಸೋಂಪ** : ಹೇಳ್ದೊ ಎಲ್ಲಕ್ಕೂ ಕಾಲ ಕೂಡಿ ಬರೊಕು. ಬಂದದೆ – ಈಗ ದೆಸೆಫಲ ಸರಿ ಇಲ್ಲೆ – ಶನಿ ಅಡ್ಡ ನಿಂತದೆ. ಮುಂದೆನ ಬಿಸು ಕಳೆಯಲಿ. ಮೊದ್ವೆ ಆಗಿಯೇ ಆದೆಂತ ಕವಡೆ ಜಾತಕಲಿ ಕಂಡದೆಂತ.

**ರಾಂಪ** : ಯಾವ ಕಡೆಂದ ಸಂಬಂಧ ಗಡ – ಕೇಳ್ತಿಲ್ಲೆನೀ.

**ಸೋಂಪ** : ಕೇಳ್ಯೋಳೆ. ಬಾರೀ ದೂರ ಅಲ್ಲ ಗಡ. ಹತ್ತಿರದವೆ. ಗೊತ್ತಿರುವವೆ. ಅವೇ ಗೂಡೆನ ಕೇಳಿಕಂಡ್ ಬಂದವೆ ಗಡ. ಈಗ ಗ್ರಹಗತಿ ಸರಿಯಿಲ್ಲೆ. ಒಂದು ಉರ್ಕು ಮಾಡಿ ಕೊಟ್ನೆಂತ – ನಾಡ್‌ದ್ ಬಾಕೆ ಹೇಳ್ಯೊಳೊ.

**ರಾಂಪ** : ಆಗಲಿ ಜೋಯ್ಸರ ಉರ್ಕುಂದಾರ್ ಒಂದು ಮೊದ್ವೆ ಆಗಲಿ.

**ಸೋಂಪ** : ಏನೋ ಬಾವ – ನೀವೆಲ್ಲಾ ಮನಸ್ ಮಾಡಿರೆ ಆದೆ.

**ರಾಂಪ** : ನೀ ಅಷ್ಟ್ ಹೇಳೊಕಯಾ. ನನ್ನ ಮಂಜಂಗೆ ನಿನ್ನ ಮಗಳ ತಾತಿದ್ದೆ. ಆದರೆ ಬಳಿ ಒಂದು ಅಡ್ಡ ಬಂದವಲೆ. ನಿಮ್ಮ ಬಳಿಂದ ಹೆಣ್ ತಂದರೆ ಮನೆ ಗುಂಡಾಂತ್ರ ಹೋವುದುಂತ ನನ್ನ ಹೆಣ್ಣ್ ಬೊಬ್ಬೆ ಹೊಡ್ದದೆ. ಏನ್ ಮಾಡುದು ಹೇಳ್.

**ಸೋಂಪ** : ಏನ್ ಮಾಡಕ್ ಬಾವ. ನಮ್ಮದ್ ಒಂದ್ ಬಳಿ ಉಟ್ಟಲೆ ಸುಟ್ಟದ್. ನನ್ನ ಹೆಣ್ಣ್ ಬಾರಿ

ಕಡ್ಪು. ಮುಂಡಾಸ್‌ನವು ಬಾದುಲ್ಲೆ – ಮುಟ್ಟಾಲೆಯಕ್ಕೆ ಕೊಡಿಕೆ ಅಯ್ಯೆಗೆ ಮನ್ಸಿಲ್ಲೆ. ಅಯ್ಯೆ ಒಪ್ಪಿರೆ ಗೂಡೆ ಒಪ್ಪುದುಲ್ಲೆ – ಹಿಂಗಾಗುಟ್ಟು..

**ರಾಂಪ** : ನೋಡುಮೊ ನಾ ಕೂಡ ಒಂದೆರಡ್ ಕಡೆ ನೋಡಿ ಗೂಡೆನ ನೋಡಿಕೆ ಕರ್ಕಂಡ್ ಬನ್ನೆ.

**ಸೋಂಪ** : ಅಸ್ಟ್ ಮಾಡಿ ಬಾವ. ನೀವ್ರೊಮ್ಮೆ ಬಂದ್ ಮನೇವುಕ್ಕೆ ಒಸಿ ಹೇಳೊಕು. ನಾ ಅಂದರೆ ಅವುಕ್ಕೆ ಕಾಲ್‌ಕಸ. ನಾ ಹೇಳ್ರೆ ಎಲ್ಲಾ ಗೊತ್ತುಟ್ಟುಂತ ಮೋರೆ ತಿರುಗ್ಸೆ.

**ರಾಂಪ** : ಆವುದ್‌ಯಾ ನೋಡ್ನೆ ಪೋಯಿ ಹೊತ್ತಾತ್. ಮನೆಲಿ ಕಾದವೆನೋ ಏನೋ. ಮಂಜಂಗೆ ಎಂಣೆ ಪೂಜಿ ಶಾಕ ಕೊಡಿಕೆ ಉಟ್ಟು.

**ಸೋಂಪ** : ಪೋಯಿ ಪೋಯಿ ಕಣ್ಣ ಬೆಳ್ಚ ಗುತ್ತಿಗೆಗೆ ಬಾವ ಹೊತ್ತಾತ್.

**ರಾಂಪ** : ಹೌದ್ – ಗಡಂಗಿಗಾಗಿಯೇ ಪೋಯಿ. ಬಾಯಿ ಬಾರಿ ಸಪ್ಪೆಸಪ್ಪೆ ಅಲ್ಲ ಉಪ್ಪುಪ್ಪಾದೆ. ಪೋಯಿ. *(ತೆರಳುವರು)*

# ಬೊಳ್ಳಾಕನ ಮುಗ್ತ್

## 4

*(ನಾಗಪ್ಪನ ಮನೆ ಚಾವಡಿ. ಮಂಚದಲ್ಲಿ ಕುಳಿತು ಏನನ್ನೋ ಯೋಚಿಸುತ್ತಿರುವವನಂತೆ ನಂಜ ಕೈಯಲ್ಲಿರುವ ಕೋಲಿನಿಂದ ಜಾಗಟೆಯ ಬದಲು ಮಂಚದ ಹಲಗೆಗೆ ತಾಳದ ಪೆಟ್ಟು ಹಾಕುತ್ತಿದ್ದಾನೆ. ತುಸು ಹೊತ್ತು ಇದೇ ಗತಿಯಲ್ಲಿ ಮುಂದುವರಿಯುತ್ತಿದ್ದಂತೆ ಒಳಗಿನಿಂದ ಶಿವಮ್ಮಳ ದನಿ ಕೇಳುತ್ತದೆ)*

**ಶಿವಮ್ಮ** : ಮಂಜ ! ಏನ್ ಮಾಡ್ತಾ ಒಳ ಅಲ್ಲಿ. *(ಹೊರಬಂದು)* ತಾಳದ ಪೆಟ್ಟ್ ಕೇಳ್‌ತಾ ಉಟ್ಟು. ಬಾಯಿ ಬುಡುದಿಲ್ಲೆನಾ – ಏನ್ ಯೋಚ್ನೆಲಿ ಒಳ ಮಂಜ. ನಾಳೆ ಉಬರಡ್ಕಲಿ ಆಟ ಉಟ್ಟುಗಡ. ಹೂಟೆಗೆ ತೊಂದರೆ ಆದೆಂತಲೊ.

**ನಂಜ** : ಇಲ್ಲೆವ. ನಾಳೆ ಅಮಾಸೆ. ಹೂಟೆ ಇಲ್ಲೆ. ಆಟ ಉಟ್ಟು. ಆದರೆ ಆಟಲಿ ಬಣ್ಣದ ವೇಸ ಮಾಡಿಕೆ ಜನ ಇಲ್ಲೆ. **ಏನ ಮಾಡಲಿ ನಾನು/ ಪಾಂಡವರ ಸೋಲಿಪಡೆ** । ಮೇಳದ ಯಜಮಾನ ಮಂಜಣ್ಣನೆ ಸುಧಾರಿಸೊಕಷ್ಟೆ.

**ಶಿವಮ್ಮ** : ಯಾಕೆ ಕಳೆದ ತಿಂಗ ಬಾಮಿಗೆ ಬಿದ್ದ ರಾಂಪಣ್ಣನ ಮಂಜನ ಸೊಂಟ ಸರಿಯಾತ್‌ಲ್ಲೆನಾ?

**ನಂಜ** : ಇಲ್ಲೆ – ಸೊಂಟಕ್ಕೇನೂ ಆತ್‌ಲ್ಲೆ. ಕಾಲ್‌ಗಂಟು ಮಾತ್ರ. ಈಗ ನಡೆಕೆ ಆದೆಷ್ಟೆ. ಈ ವರ್ಸ ಬಣ್ಣದ ವೇಸ ಹಾಕಿಕೆ ಬತ್ತ್. ಅವ ಬಂದರೂ ಅವನ ಅಪ್ಪ ಬುಡದ್.

**ಶಿವಮ್ಮ** : ನಿನ್ನ ಆ ಮೂಲೆಮಜಲ್ ಮಾಲಿಂಗ ಉಟ್ಟಲೆ. ಅವ ಗಟ್ಟಿ ಆಳ್.

**ನಂಜ** : *(ಒಮ್ಮೆಲೇ ಚಕಿತನಾಗಿ)* ಗೊತ್ತಾತ್. **ಲೇಸಾಯಿತಯ್ಯ ಸನ್ಯಾಸಿ ನಿಮ್ಮ ಚರಣಕ್ಕೆ** । **ಸಾಸಿರ ಶರಣೆಂಬೆನು.** ಅವುದು ಅಂವ ಈಗ ಮೇಳಲಿ ಪೆಟ್ಟಿಗೆ ಹೊರಿಕೆ, ದೀಟಿಗೆ ಹಿಡೆಕೆ ಬಂದದೆ. ಅವಂಗೆ ಅರ್ಥ ಹೇಳಿಕೆ ಬಾರದ್. ಆದರೆ ತಡ್ಪೆ ಕಿರೀಟ ಇಸಿಕಂಡ್ ಆಟ್ಬಾಸ ಕೊಡಿಕೆ ಫಸ್ಟ್ – ಅವನ ಮುಂದೆ

ರಾಕ್ಷಸ ವೇಸ ಹಾಕಿಕೆ ಮಾಡೊಕು.

**ಶಿವಮ್ಮ** : ಆತಲೆ ಇನ್ನ್ ಮೇಳಕ್ಕೆ ಬೇರೆ ಜನ ಬೇಡಲೆ.

**ನಂಜ** : ತಿಮ್ಮಪ್ಪ ಮಾಸ್ಟ್ರ ಶಾಶ್ವತ ಅಲ್ಲ. ಅವು ಬಿಟ್ಟದವು – ವರ್ಗಾಗಿ ಬೇರೆ ಸಾಲೆಗೆ ಹೋದರೆ ನಮ್ಮ ಮೇಳಕ್ಕೆ ಭಾಗವತರಿಲ್ಲೆ. ಜಾಗಟೆ ಹಿಡೆಕೆ ಬೇರೆ ಜನ ಆಕೊಸ್ಟೆ.

**ಶಿವಮ್ಮ** : ನಿಮ್ಮಲ್ಲೆ ಬೇರೆ ಜನ ಅಬ್ಬೇಸ ಮಾಡೊಕಿಯಾ. ಎಷ್ಟೊಂತ ಬೇರೆವ್ರ ನಂಬಿಕಂಡು ಇರೀಕಾದೆ.

**ನಂಜ** : ಹೌದವ್ವ. ಅದಕ್ಕೆ ನಮ್ಮ ಚೆನ್ನಕ್ಕ ಅಬ್ಬೇಸ ಮಾಡಲೀಂತ ನಾ ಹೇಳ್ದು. ಆ ಮಾಸ್ತ್ರ ಬಾಕೆ ಹೇಳ್ದ್. ಆದರೆ ಮಾಸ್ಟ್ರ ಇವಳ ಬುಟ್ಟು ಆ ಕಾಗಡೆಗದ್ದೆಗೆ ಹೋದವೆ. ಅಲ್ಲಿ ಆ ಹಾರ್ತಿಗೆ ಕಲ್ಸಿವೆ ಗಡ. ಅ ಹಾರ್ತಿ ಕುಂಬ್ಳೆದ್. ಬಾಗವತರ ಮಗಳ್ ಅಂದರೆ ಕೇಳೊಕೊ. ಎರಡೇ ದಿನಲಿ ತಾಳ ಹಾಕಿ ಹಾಡಿಕೆ ಸುರುಮಾಡ್ಯುಟ್ಟು ಗಡ.

**ಶಿವಮ್ಮ** : ಆ ಹಾರ್ತಿಯೋ ! ಒಂದು ವಾರಲಿ ಅದ್ ಮಾಸ್ತ್ರನ್ನೇ ಕೊಣ್ಸಿದೆ ನೋಡು.

**ನಂಜ** : ಹೌದವ್ವ. ಈಗೀಗ ರಾತ್ರೆ ಸಾಲೆಲಿ ತಾಳಮದ್ದಳೆ ಆಕನ ಮಾಸ್ಟ್ರ ಬಾದ್ ಅಪರೂಪ. ರಾತ್ರೆಯಿಡೀ ಹಾರ್ತಿ ಮನೆಲಿ ಪಾಠ ಊಟ ಗಡ.

**ಶಿವಮ್ಮ** : ಪೊರ್ಲಾತ್. ಅಯ್ಯ ಚಟ್ಟಕ್ಕೇರ್ಗನ ಅಮ್ಮ ಪಟ್ಟಕ್ಕೆ ಬಂದೊಂತ ಹೇಳ್ವೆಲೆ ? ಹಂಗಾತ್. ಮೂರು ಮದ್ವೆ ಆಗಿ ಮಕ್ಕ ಆಗದ ಆ ಅಯ್ಯ ಈ ಪ್ರಾಯಲಿ ಕುಂಬ್ಳೆಂದ ಇದರ ತಂದುಟು. ಹಾರವ ರಾತ್ರಿ ಗೂರುಕೆ ಹೊಡೆಲಿ. ಹಾರ್ತಿ ಮಾಸ್ತ್ರ ಜೊತೆ ತಾಳ ಹೊಡೆಯಲಿ. ಕತೆ ಏನಾದೊಂತ ಗೊತ್ತಾದಲೆ.

**ನಂಜ** : ನಮ್ಮ ಮೋಂಟ ಅಲ್ಲೇ ಉಟ್ಟಲ್ಲವ್ವ.

**ಶಿವಮ್ಮ** : ಇರದೆ ಎಲ್ಲಿ ಹೋದೆ. ಹೋಕೆ ಆ ಹಾರ್ತಿ ಬುಡೊಕಲೆ. ಕೇಳ್ರೆ ಅವ ಹೇಳ್ದೆ ಪುಕುಳಿ ತುರ್ಸಿಕೆ ಪುರ್‌ಸೊತ್ತಿಲ್ಲೆಂತ. ಪಾಪಂತ ಕಂಡದೆ ಆ ಹೈದನ ನೋಡ್ಕನ – ಅದಾ ನಾಯಿ ಬೊಗಳಿದೆ ಯಾರ್ ಬಂದದ್‌ಂತ ನೋಡ್.

**ನಂಜ** : (ಹೊರಗೆ ನೋಡುತ್ತ) **ಅಹಹ ಫಲುಗುಣ ಗಂಡುಗಲಿ ನೀ.** ನೀ ಹೇಳ್ದಾಂಗೆ ಆತವ್ವ. ಗದ್ದೆ ಪುಣಿಲಿ ಮೋಂಟನೇ ಬಂದದೆ ನೋಡ್.

**ಶಿವಮ್ಮ** : ಮೋಂಟನೋ ಬರಲಿ ಏನೋ ವಿಶೇಷ ಇರೊಕು ಅಯ್ಯನ ಮನೆಲಿ. *(ಮೋಂಟ ತಲೆಯ ಬೈರಾಸು ತೆಗೆಯುತ್ತಾ ಬರುವನು)*

ನಂಜ : ಮೋಂಟಣ್ಣ ! ಬಾರೀ ಅಪರೂಪ, ಬರೊಕು. ಬರೊಕು. **ಬನ್ನಿರೈ ಸಂಸಾರ ಶರಧಿಯನು ದಾಂಟುವರು.**

**ಶಿವಮ್ಮ** : ಏನಿಯಾ ಮೋಂಟ ! ಜಂಬರ ಕಳ್ದ್ ಎರಡ್ ವಾರ ಆತ್. ಈ ಕಡೆ ಮೋರೆನೇ ತೋರ್ಸಿತ್ತಿಲ್ಲೆ ನೀ.

**ನಂಜ** : ಎಲ್ಲಿ ಪುರ್ಸೊತ್ತುಟ್ಟು ಅಜ್ಜವ. ಒಮ್ಮೆ ಅತ್ತ ಆ ಅಯ್ಯ ಒಮ್ಮೆ ಇತ್ತ ಈ ಅಮ್ಮ.

**ಶಿವಮ್ಮ** : ಹೌದೊದು. ನಿಂಗೆ ಮಕುಳಿ ತುರ್ಸಿಕೆ ಪುರ್ಸೊತ್ತಿಲ್ಲೆ. ಅಲ್ಲ ಮೋಂಟ ! ಮಕುಳಿ ನಿನ್ನದೊ ಅವರದೊ? ಮತ್ತೆ ಜಂಬರ ಸುರು ಮಾಡ್ಯೊಳೊ ಹೇಂಗೆ.

**ನಂಜ** : ಹಾಂಗೇನಿಲ್ಲಪ್ಪ. ನಾಡ್‌ದ್ ಅಲ್ಲ ಆಚೆನಾಡ್‌ದ್ ಒಂದು ಕಳೆಯಲಿ. ಮತ್ತೆ ಅಲ್ಲಿಗೆ ತಲೆ ಹಾಕಿಕಿಲ್ಲೆ.

**ಶಿವಮ್ಮ** : ಅಷ್ಟಾಕನ ಮತ್ತೊಂದು ಸುರುವಾದೆ. ನೀ ಮೊದ್ವೆ ಆದಾಂಗೆ ಮೋಂಟ. ಥೇಟ್ ಪೆದ್ದ ನೀ.

**ಮೋಂಟ** : ಇಲ್ಲೆ. ಈಗ ನಂಗೆ ಎಲ್ಲ ಅರ್ಥ ಆದೆ. ನಾ ಮೊದ್ವೆ ಆವುದು ಖಂಡಿತ. ಅಜ್ಜಪ ಗೂಡೆ ಹುಡ್ಕಿನೆಂತ ಹೇಳ್ಯೊಳೊ. ಮತ್ತೆ ನೀವು ನಂಜಪ್ಪಣ್ಣ ಒಳರಿ ಅಲೆ. ನನ್ನ ಬುಟ್ಟು ಹಾಕಿಕಿಲ್ಲೆಂತ ನಂಬ್ಯೊಳೆ.

**ನಂಜ** : ಮೋಂಟಣ್ಣ ! **ಬಿಡುಬಿಡು ಶೋಕವ । ನುಡಿಯನು ಲಾಲಿಸು । ಪೊಡವಿಪ ಕೌರವನೆ.** ನಾ, ನನ್ನ ಗುರುಗ ಮಂಜಣ್ಣ ಇರ್ಕನ ನಿನ್ನ ಮೊದ್ವೆ ಆತ್‌ಂತ ಗ್ರೇಸಿಕಾ.

**ಮೋಂಟ** : ಆದಣ್ಣ. ಇಂದ್ ರಾತ್ರಿ ಲೈಟಿಗೆ ಪೋಯಿ. ಬನ್ನೆಂತ ಅಜ್ಜಪಂಗೆ ಹೇಳ್ಯೊಳೆ. ಆದರೆ ಇಂದ್ ಬಾಕೆ ಆವುದಿಲ್ಲೆಂತ ಹೇಳಿಕೆ ಬಂದದ್.

**ಶಿವಮ್ಮ** : ರಾತ್ರೆ ಏನುಟ್ಯಾ ಅಯ್ಯನ ಬುಟ್ಟಿ.

**ಮೋಂಟ** : ಅಯ್ಯಂದಲ್ಲ ಅಮ್ಮಂದ್ – ಇಂದ್ ರಾತ್ರೆ ಹಪ್ಪಳ ಒತ್ತಿಕೆ ಉಟ್ಟು ಗಡ. ನಾಲ್ಕೈದ್ ಹಲಸಿನ ಕಾಯಿ ಕೊಯ್ದ್ ತೋಳೆ ಬೇಯಿಕೆ ಒಲೆಲಿ ಇಸ್ಯೊಳೊ.

**ಶಿವಮ್ಮ** : ನಿನ್ನ ಅಯ್ಯ ಇಲ್ಲೆಯಾ ಒತ್ತಿಕೆ.

**ಮೋಂಟ** : ಅಯ್ಯ ಒತ್ತಿರೆ ತೆಳ್ಳಗಾದುಲೆ ಗಡ – ನಾನೆ ಒತ್ತೊಕೂಂತ ಅಮ್ಮಂದ್.

**ಶಿವಮ್ಮ** : ರಾತ್ರಿ ಮಾಸ್ಟ್ರ ಬಾಗತಿಕೆ ಕಲ್ಸಿಕೆ ಬಂದವೆ ಗಡಾ....!

**ಮೋಂಟ** : ಬಂದವೆ – ಆದರೆ ಇಂದ್ ಏತ್ತಾರಲ್ಲ. ಊರಿಗೆ ಹೋಗೊಳೊ. ಹಂಗೆ ಇಂದ್ ರಾತ್ರಿ ಹಪ್ಪಳ ಒತ್ತಿಕೆ ಚಾಪೆ ಬುಡ್ಸಿ ಹಾಕೊಳೊ.

**ಶಿವಮ್ಮ** : ಅಮ್ಮನ ಜತೆ ನೀ ಕೂಡ ಪದ ಹೇಳಿಕೆ ಕಲಿಯೋಕ್ಯ.

**ಮೋಂಟ** : ಮಾಸ್ಟ್ರ ನಂಗೆಲ್ಲಿ ಹೇಳಿ ಕೊಟ್ಟವೆ. ಅಮ್ಮಂಗೆ ಮಾಸ್ಟ್ರ ಕಲ್ಸಿಕನ ಅಮ್ಮ ನನ್ನ ಗದ್ದೆ ಮಾಡಂಗೋಲಿಗೆ ಮನ್ಗಿಕೆ ಕಳ್ಸುವೆ. ಅಯ್ಯ ಗುಡಿ ಹಾಕಿ ಮನ್ಗಿದವು ಏಳುದು ಬೊಳ್ಪಾಕನ. ಹೋಗಲಿ ಆ ಕತೆ. ನಾ ಹೋನೆ. ಅಜ್ಜಪ ಎಲ್ಲಿ ಹೋಗೊಳೊ.

**ಶಿವಮ್ಮ** : ನಿಂಗೆ ಗೂಡೆ ನೋಡಿಕೆ ಹೋಗೊಳೊಯ. ಗೂಡೆ ಆಗುಟ್ಟೊಂತ ಕೇಳಿಕೆ ನೀ ಬಂದವಂತ ಕಂಡದೆ. ನೀ ಬರಿ ಪೆದ್ದ ಅಲ್ಲಯ ಪೆದ್ದ ಜಾಣ. ಈಗ ಆ ಹಾರ್ತಿನ ಹಪ್ಪಳ ಒತ್ತಿ ಬುಟ್ಟ್ ಮೊದ್ವೆ ಆನೆಂತ ಹೇಳ್ಯ. ಗೂಡೆ ಆಕನ ಮತ್ತೆ ಮಕುಳಿ ತುರ್ಸಿಕೆ ಪುರುಸೊತ್ತಿಲೆಂತ ಹಪ್ಪಳ ಒತ್ತಿಕೆ ಹೋಕಿಲ್ಲೆಲೆ.

**ಮೋಂಟ** : ಇಲ್ಲೆ ಉಗವ್ವ. ಇಂದ್ ಕಡೇ ಸರ್ತಿ ಹಪ್ಪಳ ಒತ್ತಿ ಬನ್ನೆ. ಮತ್ತೆ ಅತ್ತ ತಲೆ ಹಾಕಿಕಿಲ್ಲೆ. ನಂಜಣ್ಣ. ಬನ್ನೆ *(ಹೆಗಲ ವಸ್ತ್ರವನ್ನು ತಲೆಗೆ ಸುತ್ತಿ ಹೋಗುವನು)*

ನಂಜ : ಆದು ಆದು. **ಹೋಗಿ ಹೇಳಮ್ಮ ಹೊತ್ತು.**

**ಶಿವಮ್ಮ** : ಇಂದಾ ನಂಜ ನಿನ್ನ ಪದ ಹೆಚ್ಚಾದೆ – ಪದ ನಿಲ್ಸಿ ಅರ್ಥ ಮಾತ್ರ ಹೇಳ್ – ನಾ ಹೇಳ್ದರ

ಕೇಳ್. ನೀ ನಿನ್ನಪ್ಪ ಆ ಮಂಜ ಕೂಡಿ ಮೋಂಟಂಗೆ ಒಂದ್ ಮೊದ್ವೆ ಮಾಡಿ.

**ನಂಜ** : ಆದವ್ವ ಅರ್ಥನೆ ಹೇಳ್ನೆ. ಆದರೆ ಮೋಂಟಂಗೆ ಗೂಡೆ ಯಾರ್.

**ಶಿವಮ್ಮ** : ಯಾರಾರ್ ಯಾಕೆ ಹುಡ್ಕೊಕುಯಾ ಮಜಲ್‌ಗದ್ದೆ ಸೋಂಪನ ಮಗ ಮೋಂಟಿ ಉಟ್ಟಲೆ. ಸೋಂಪನೂ ಗೂಡೆಗೆ ಗಂಡ್ ಹುಡ್ಕಿ ಭಾರೀ ಸೋತುಟ್ಟು – ಮೊನ್ನೆ ಬಂದವ ನಿನ್ನಪ್ಪನೊಟ್ಟಿಗೆ ನೀವ್, ಹೇಂಗಾರ್ ಮಾಡಿ ಗೂಡೆಗೆ ಮೊದ್ವೆ ಮಾಡೊಕುಂತ ಹೇಳ್ಯುಟ್ಟು.

**ನಂಜ** : *(ಆಶ್ಚರ್ಯದಿಂದ)* ಯಾರ್ ಮೋಂಟಿ ! ಮೋಂಟಂಗೆ ? ಏನ್ ಹೇಳ್ಯವ್ವ... ಮೋಂಟ ಒಪ್ಪೊಕಲೆ. ಮೋಂಟ ಒಪ್ಪಿರೂ ಆ ಗೂಡೆ ಅದರಯ್ಯೆ...

**ಶಿವಮ್ಮ** : ಗೌರು ನಿನ್ನಪ್ಪನ ಮಾತ್ ತೆಗ್ದ್ ಹಾಕದ್. ನಿನ್ನಪ್ಪ ಮೋಂಟಂಗೆ ಮೊದ್ವೆ ಮಾಡ್ಸಿನೆಂತ ಮಾತ್ ಕೊಟ್ಟೊಳೊ. ಅವರೊಟ್ಟಿಗೆನೂ ಮಾತಾಡ್ಯೊಳೊ.

**ನಂಜ** : ಅವ್ವಾ ಎಂತಾ ಮಾತ್. **ಒಂದು ಚೂರಿಗೆರಡು ಒರೆಯು**.....

**ಶಿವಮ್ಮ** : ಬೇಡ – ನಿನ್ನ ಪದ ತೆಗಿಬೇಡ. ನಾ ಹೇಳ್ನೆ ಕೇಳ್. ಆ ಮೋಂಟಂಗೆ ಅ ಮೋಂಟಿನ ಮೊದ್ವೆ ಮಾಡಿರೆ ನಮ್ಗೇ ಲಾಭ. ಮೋಂಟ ಆ ಹಾರವರ ಮನೆ ಬುಟ್ಟು ಇಲ್ಲಿಗೇ ಬಂದದೆ. ಅವ ಮೊದ್ವೆ ಆಗಿ ಅಲ್ಲಿ ಇಲ್ಲಿಂತ ಬುಟ್ಟಿ ಮಾಡಿಕಂಡ್ ಇಲ್ಲೆ ಇರಲಿ. ನಮ್ಗೇ ಅನ್ಕೂಲ ಆದೆ. ನಿಂಗೂ ನಿನ್ನಪ್ಪನ ಚಟ ಸುರುವಾಗುಟ್ಟುಂತ ನಂಗೆ ತಿಳ್ದುಟ್ಟು. ಮೊದ್ವೆ ಆದರೂ ನಿನ್ನ ಮೋಂಟಿ ಮಧ್ಯ ಆ ಮೋಂಟ ಅಡ್ಡ ಬಾರದ್. ನಿನ್ನಪ್ಪ ಅದರಯ್ಯೆ ಗೌರು ಅಲ್ಲಿ ಹೋಗಿ ಬಾವುದು ಸೋಂಪಂಗೆ ಗೊತ್ತಾದೆಯೊ ? ಮೋಂಟನ ಹಾಂಗೆ ಸೋಂಪನೂ ಪೆದ್ದ. ಆ ಮನೆಲಿ ಅವ್ವ ಮಗಳದೇ ಕಾರ್ಬಾರ. ಆ ಕಾಗಡೆಗದ್ದೆ ಅಯ್ಯನ ಹಾಂಗೆ ಈ ಸೋಂಪನೂ ಬೈಲಿಗಿಸಿದ ಬೆರ್ಚಪ್ಪ. ಕದ್ದ್ ಮೇವವು ಮೇದ್ ಹೋದವೆ.

**ನಂಜ** : ಅವ್ವಾ

**ಶಿವಮ್ಮ** : ಹೇಳ್ದಲ್ಲ. ಆ ಗೌರು ನಿನ್ನಪ್ಪನ ಹೇಂಗೆ ಒಳ ಮಾಡುಟ್ಟೊ ಹಾಂಗೆ ನಿನ್ನ ಆ ಗೂಡೆ ಮರ್ಲ್ ಮಾಡ್ಯುಟ್ಟು. ನಮ್ಮ ಚೆನ್ನಕ್ಕ ಹೇಳ್‌ದ್ರ ಕೇಳ್ದೆ. ಆಟಕ್ಕೆ ಬಂದ ಮೋಂಟಿ ಗೂಡೆ ಮತ್ತೆ ನೀ ಕೈ ಕೈ ಹಿಡ್ಕಂಡ್ ತಿರುಗ್ಯೊಳರಿಗಡ. ಅದ್ಕೆ ಸಂತೆಲಿ ಕೈಗೆ ಬಳೆ ತೆಗ್‌ದ್‌ಕೊಟ್ಟೊಳೆ ಗಡ.

**ನಂಜ** : ಅದ್.. ಅದ್ ನಮ್ಮ ಚೆನ್ನಕ್ಕ ಬಳೆ ತೆಗೆಕನ – ಅದೂ ಒಟ್ಟಿಗೆ ಬಾತ್.

**ಶಿವಮ್ಮ** : ಹೌದೊ ! ಆಗಲಿ – ನಿನ್ನ ಪ್ರಾಯಲಿ ಒಮ್ಮೊಮ್ಮೆ ಹಿಂಗಾದೆ. ನೀ ಒಂದ್ ಮೊದ್ವೆ ಆಗಿ ಈ ಚಟ ಬುಡೊಕು. ನಿನ್ನಪ್ಪನ ಹಾಂಗೆ ಮುಂದರ್ಸಿಕಾಗದ್.

**ನಂಜ** : ಆದವ್ವ – ನನ್ನ ಮೊದ್ವೆಗೆ ಮುಂದೆ ನಮ್ಮ ಚೆನ್ನಕ್ಕಂಗೆ ಮೊದ್ವೆ ಆಕು.

**ಶಿವಮ್ಮ** : ಅದ್– ಅದ್ ನಮ್ಮ ತಲೆಲುಟ್ಟು – ನಿನ್ನಪ್ಪ ಸಂಬಂದ ಹುಡುಕ್ತಾ ಒಳೊ.

**ನಂಜ** : ನಮ್ಮ ನಂಜಣ್ಣನೇ ಇರ್ಕನ ಬೇರೆ ಯಾಕವ್ವ ಹುಡ್ಕುದು ?

**ಶಿವಮ್ಮ** : ನಂಗೂ ಅದೇ ಮನ್ಸ್‌ಲಿ ಉಟ್ಟು. ಆದರೆ ಅವ ಒಪ್ಪೊಕಲೆ.

**ನಂಜ** : ಅವನ ನಾ ಒಪ್ಸಿನೆ – ನನ್ನ ಮಾತ್ ಮಂಜ ತೆಗ್ದ್ ಹಾಕದ್ – ಅಂವ ನನ್ನ ಯಕ್ಷಗಾನ ಗುರು – ತಂಗೆನ ಮೊದ್ವೆ ಆದರೆ ಬಾವ ಆದೆ.

**ಶಿವಮ್ಮ** : ಮಂಜ ನನ್ನ ನೇರ ನೋಡಿರೆ ದೂರಲಿ ನಿಂಗೆ ಬಾವನೆ ಆದೆಯಾ. ನೀ ಬಾವಂತ ಅವನ

ಕರಿಯಕ್ಕ್.

**ನಂಜ** : ಹೌದವ್ವ. ಇನ್ನ್ ಹಾಂಗೆ ಕರ್ದನೆ – ನೀ ಚೆನ್ನಕ್ಕನ ಅಪ್ಪನ ಹೇಳಿ ಒಪ್ಸಿರೆ ಆತ್. ಮೊದ್ವೆ ಆದೆ.

**ಶಿವಮ್ಮ** : ಮಂಜ ಚೆನ್ನಮ್ಮರದ್ದ್ ಮಾತ್ರ ಅಲ್ಲಯಾ ಮಂಜನ ತಂಗೆ ಕುಂಞಕ್ಕ ಉಟ್ಟಲೆ ಅದರ ಕುತ್ತಿಗೆಗೆ ನೀ ತಾಳಿ ಕಟ್ಟೋಕು– ಮೊಗುಳು ಮನೇಂದ ಹೋಕನ ಸೊಸೆ ಮನೆಗೆ ಬರೋಕು – ಒಂದೇ ಮಂಟಪಲಿ ಕೊಡುದು ಮತ್ತು ತಾವುದು ನಡ್ಯೊಕು. ಏನ್ ಹೇಳ್ಯ. ಆಗದೊ ? ಆ ಗೂಡೆನ ನೀ ಒಪ್ಪಿಯಲ್ಲ ?

**ನಂಜ** : ಅಪ್ಪ ಅವ್ವನ ಮಾತಿಗೆ ನನ್ನ ಅಡ್ಡಿಯಿಲ್ಲೆ. ಆಗಲಿ. **ಆಯಿತು ಸೇತುಕಟ್ಟಿ ರಾಜೇಂದ್ರ । ವಾಯು ನಂದನ ತಂದ.**

**ಶಿವಮ್ಮ** : ನಿನ್ನ ಬಾವನ ಪದಕುಣಿತ ಒಸಿ ಕಡಿಮೆ ಮಾಡಿಕೆ ಹೇಳ್. ನೀ ಕೂಡಾ *(ಹೊರಗೆ ನೋಡಿ)* ನೋಡ್ ನಿನ್ನಪ್ಪ ಬಂದೊಂತ ಕಂಡದೆ. ನಾ ಒಳ ಹೋನೆ, ಉಂಬಕೆ ಗೈಮು ಆಕಷ್ಟೆ *(ಹೋಗುವಳು)*

**ನಂಜ** : *(ಎದ್ದು ಹೊರಡುತ್ತ)* ಅಲ್ಲಿ ಮಜಲಿಗೆ ಹಕ್ಕಿಗ ಬಂದವೆ. ಪಡಿ ಬಿದ್ದುಟ್ಟೋ ನೋಡಿ ಏರ್ಸಿ ಬನ್ನೆ *(ಹೋಗುತ್ತಾ)* **ಮಾರೀಚಂ ಪೋಂ ಮೃಗವಾಗಿ......**

# ಬೊಳ್ಳಾಕನ ಮುಗ್ತ್

5

*(ಮೈದಾನದಲ್ಲಿ ಕುಕ್ಕಪ್ಪ ಕುಶಲಪ್ಪ ಬಿಸಿಲಲ್ಲಿ ನಡೆದು ಬರುತ್ತಿರುವುದು)*

**ಕುಕ್ಕ** : *(ಸಡಿಲಿಸಿದ ವಸ್ತ್ರವನ್ನು ತಲೆಗೆ ಸುತ್ತಿಕೊಂಡು)* ಯಾ ಬಿಸ್ಲ್‌ಯಾ. ತಲೆ ಸುಟ್ಟದೆ. ಈ ನಟ್ಟ ಮಧ್ಯಾಹ್ನ ಪದವಿಲಿ ಕಾಲಿಸಿಕೆ ಬತ್ತ್.

**ಕುಶಲ** : ಬಾರಿ ಸುಟ್ಟದೆಯ. ಆದರೆ ಜಾತ್ರೆಗೆ ಹೋಗಿ ಬಾವ ಜನ ಕಡಮೆ ಆದೊನೊ ನೋಡ್. ಆ ಜಾತ್ರೆ ಅಡ್ಕಲಿ ಮಣಿಸರಕ್ ಅಂಗಡಿ ಸುತ್ತ ಹೆಮ್ಮಕ್ಕ ಇನ್ನೂ ಸುತ್ತುತ್ತಾ ಒಳೊ ನೋಡ್.

**ಕುಕ್ಕ** : ರಾತ್ರಿ ಆಟ ಬೂತಗ – ಹಗಲ್ ಜಾತ್ರೆ ಆಯನ – ಅಂತ್ ಜನಕ್ಕೆ ನೋಡಿದಷ್ಟ್ ಬೊಡಿಯದ್.

**ಕುಶಲ** : ಅಂತ್ ಬೊಳ್ಳಾಕನ ಜಾತ್ರೆ ಒಂದ್ ಮುಗ್ತ್ – ಕೋಳಿ ಕಟ್ಟನೂ ನಾಳೆಗೆ ಮುಗ್ದದೆ.

**ಕುಕ್ಕ** : ನಮ್ಮ ಆಟ ಮೊನ್ನೆ ಒಂದೇ ದಿನ ಮಾಡಿದಲ್ಲ. ಕಳ್ದವರ್ಸ ಮೂರು ದಿನ ಮಾಡ್ಯೊಳೊ.

**ಕುಕ್ಕ** : ಮೂರು ದಿನ ಮಾಡಿಕೆ ಭಾಗವತರ್ ಬೇಕಲೆ. ತಿಮ್ಮಪ್ಪ ಮಾಸ್ಟ್ರ ಊರಿಗೆ ಹೋದವು ಬಾತೇ ಇಲ್ಲೆ.

**ಕುಕ್ಕ** : ಯಾಕೊ ಮಾಸ್ಟ್ರಿಗೆ ಮೊದಲ್‌ನಂಗೆ ಈಗ ಉಮೇದೇ ಇಲ್ಲೆ – ಅವು ಮನೆ ಮನೆಗೆ ಹೋಗಿ ಪದ ಕಲ್ಸಿಕೆ ಸುರು ಮಾಡಿ ಹಿಂಗಾಗುಟ್ಟು.

**ಕುಶಲ** : ಹೀಂಗೆ ತಾಳಮದ್ದೆ ಆಟ ನಿಂತರೆ ಮತ್ತೆ ಸುರುವಾದೆ ಕೋಳಿಕಟ್ಟ ಜುಗಾರಿ ಕಂಬಳಾಂತ ಜನ ಅದಕ್ಕೆ ಹೋದವೆ. ಬಾ ಅಲ್ಲಿ ಮರದ ನೆರ್ಲ್‌ಗೆ ಪೋಯಿ. ಬಿಸ್ಲಿಗೆ ನಡೆಕಾದುಲ್ಲೆ. *(ಇಬ್ಬರೂ ಮರದ ನೆರಳ ಕಟ್ಟೆಯಲ್ಲಿ ಕುಳಿತು ಕೊಳ್ಳುವರು)*

**ಕುಕ್ಕ** : ನೀ ಕಂಬಳಂತ ಹೇಳ್ಕನ ನೆಂಪಾತ್. ಈ ಸರ್ತಿ ಪೂಕರೆ ಕಂಬಳ ಗದ್ದೆಲಿ ಪಟೇಲ್ರ ಕೋಣಗ ಯಾಕೆ ಮುಂದೆ ಬಾತಿಲ್ಲೆಯ.

**ಕುಶಲ** : ಪಟೇಲ್ರ ಕೋಣಗ ಮುಂದೆ ಬರೋಕಾಗಿತ್ತ್. ಅದರ ಬದ್ಲ್ ಗುರಿಕಾರ್ರ ಕೋಣಗ ಬಂದೊ. ಇದರಲ್ಲಿ ಗುರಿಕಾರ್ರ್ ಒಂದು ಚದಿ ಮಾಡ್ಯೊಳೊ.

**ಕುಕ್ಕ** : ಏನಿಯಾ ಅದ್.

**ಕುಶಲ** : ಪಟೇಲ್ರ ಕೋಣಗಳ ಓಡುಸ್ವ ಆ ಪುರ್ಬು ಉಟ್ಟಲೆ ಅವನ ಗುಟ್ಟ್‌ಲಿ ಕರ್ದ್ ಇಡೀ ಕುಪ್ಪಿ ಕುಡ್ಸಿದ್ ಗಡ – ಕೋಣಗ ಓಡಿದರೂ ಕುಡ್ದ ಮತ್ತ್‌ಲಿ ಪುರ್ಬುಗೆ ಹೆಜ್ಜೆ ತೆಗೆಕೆ ಆತಿಲ್ಲೆ. ಹಾಂಗೆ ಗುರಿಕಾರ್ರ ಕೋಣಗ ಮೆಡ್ಲ್ ಪಡ್ದೊ.

**ಕುಕ್ಕ** : ಹೌದಣ್ಣ. ಇದ್ ಒಳ್ಳೆ ಪ್ಯಂಟ್–ಗೆಲ್ಲೊಕಾದರೆ ಜನ ಏನೂ ಮಾಡಿವೆ.

**ಕುಶಲ** : ಗುರಿಕಾರ್ರ ಗುಟ್ಟು ರಟ್ಟಾಗುಟ್ಟು. ಈ ವರ್ಸ ಜನ ಪುರ್ಬುನ ಗದ್ದೆಗೆ ಇಳಿಕೆ ಬುಡ್‌ದುಲ್ಲೆ. ಅಡ್ಡ ನಿಂತ್ ಯಾರ್‌ೀ ಆಡಿಕಾಗದ್. ಕಳ್ದ ವರ್ಸ ನೋಡು ಓಲೆಸಿರಿಲಿ.

**ಕುಕ್ಕ** : ಹೌದು. ಪಾಪ. ಆ ಕಾರ್ಯಪ್ಪಂಗೆ ನಾರ್ಣಪ್ಪ ತಾರಾಮಾರ ಪೋಳಿ ಹಾಕ್ಯುಟ್ಟಲ್ಲ.

**ಕುಶಲ** : ನಾರ್ಣಪ್ಪಂಗೆ ಕಾರ್ಯಪ್ಪನ ಮೇಲೆ ಹಳೇ ಕೋಪ ಇತ್ತ್. ಅವನ ಒಂದು ಕೂಟ ಉಟ್ಟಲೆ ಅವು ಒಳಗೊಳಗೆ ಗುಟ್ಟಾಗಿ ಪಯ್ಯೊಳಿಗೆ ನಿಂತೊ. ಕೆಲವು ಹೊಡ್ಕೊಂಡಾಂಗೆ ಮಾಡ್‌ದೊ. ಅಡ್ಡಣಹಿಡ್ದ್ ನಿಂತ ಕಾರ್ಯಪ್ಪಂಗೆ ಬೀತ್ ನಾರ್ಣಪ್ಪನ ಬೆತ್ತದ ಪೋಳಿ.

**ಕುಕ್ಕ** : ಬುಡ್‌ಸಿಕೆ ಭೂತ ಅಡ್ಡ ಬರೊಕಲೆ. ಅದ್ ಬಾತ್‌ಲ್ಲೆ ?

**ಕುಶಲ** : ಭೂತ ಬಾಕೆ ಅಡ್ಡ ಮಾಡ್‌ದೊ. ಎಲ್ಲರ ಬುಡ್ಸಿ..ಬುಡ್ಸಿ ಭೂತ ಬಾಕನ ಕಾರ್ಯಪ್ಪನ ಬೆನ್ನ್ ಪೊಡಿ ಪೊಡಿ.

**ಕುಕ್ಕ** : ಪಟೇಲ ಗುರಿಕಾರ್ರ್ ನೋಡ್ತ್‌ಲ್ಲೆ ಇದರ

**ಕುಶಲ** : ಪಯ್ಯೋಳಿ ನಿಂತವ್ರೂ ಪಟೇಲ ಗುರಿಕಾರ್ರ ಎದ್ರೆದ್ರ್ ಕಡೆವು – ನ್ಯಾಯ ಎಲ್ಲಿಟ್ಟು – ತೀರ್ಮಾನ ಎಲ್ಲ ಭೂತಕ್ಕೆ ಬುಟ್ಟುಕೊಟ್ಟೊ. ತಪ್ಪು ಒಪ್ಪು ನಾನೇ ನೋಡಿಕಂಡನೇಂತ ಭೂತ ದರ್ಶನ ಬಂದ್ ಹೇಳ್ತ್. ಇನ್ನ್ ಮುಂದೆ ಪೈಯೋಳಿ ಹಿಡ್ದವು ದೂರ ದೂರಲೇ ನಿಲ್ಲೋಕು – ಮೈ ಮುಟ್ಟಿಕೆ ಬತ್ತ್‌ಂತ. ಅಲ್ಲಿಗೆ ಮುಗ್ತ್. ಈ ವರ್ಸ ಈ ಪಯ್ಯಲಿ ಹಿಡಿಕೆ ಜನಾನೆ ಇಲ್ಲೆ. ಶಾಸ್ತ್ರಕ್ಕೆ ನಾಲ್ಕ್ ಸಣ್ಣ ಮಕ್ಕಳ ನಿಲ್ಸಿದಷ್ಟೆ.

**ಕುಕ್ಕ** : ಅದೇ. ಶಾಸ್ತ್ರ ಬುಡಿಕಾಗದ್. ಅಷ್ಟೇ ಮಾಡ್ರೆ ಸಾಕ್. *(ದೂರಕ್ಕೆ ನೋಡಿ)* ಓ ಅಲ್ಲಿ ಯಾರೊ ಇತ್ತ ಬಂದವೆ. ಅವರೊಟ್ಟಿಗೆ ಕಡ್ಡಿಪೆಟ್ಟಿಗೆ ಉಟ್ಟೊ ಕೇಳೊಮೊ – ಹೊ ! ಅದ್ ನಮ್ಮ ಸೀನಪ್ಪ ಮತ್ತ್ ಸೂರಪ್ಪ ಬಾವುದು. *(ಅವರು ಹತ್ತಿರ ಬಂದಾಗ)* ಏನ್‌ಯಾ ಜಾತ್ರೆ ಕಟ್ಟಕ್ಕೆ ಹೋವವು. ಆದರೆ ಸೀನಪ್ಪನೊಟ್ಟಿಗೆ ಕೋಳಿ ಇಲ್ಲೆ – ಸೂರಪ್ಪಣ್ಣ ಬರಿಕೈಲಿ ಜಾತ್ರೆಗೆ ಹೊರಟೊಳ್ರಿ.

**ಸೀನಪ್ಪ** : ತಥ್ – ನಿನ್ನ ನಾಲಿಗೆ ಹರ್ತ ಉಟ್ಟೊಂತ ಊರಿಗೇ ಗೊತ್ತುಟ್ಟು – ನೀ ಹೇಳಿ ಬರಿಕೈಲಿ ಬಾವಂಗೆ ಮಾಡೋಕು !

**ಕುಕ್ಕ** : ಇಲ್ಲೆಪ್ಪ. ಅದ್ ಈಗ ಬಡ್ಡಾಗುಟ್ಟು–ಹೋಕನ ಬರಿಕೈಲಿ ಹೋದರೂ ಬಾಕನ ಕೈತುಂಬ ತೆಕಂಡ್ ಬಾವವು ನೀವ್ರೊಂತ ಊರಿಗೇ ಗೊತ್ತಿಲ್ಲೆ!

**ಸೂರಪ್ಪ** : ಸೀನಪ್ಪನೊಟ್ಟಿಗೆ ಕೋಳಿ ಇಲ್ಲೆಂತ ಮಸ್ಕಟೆ ಮಾಡ್ಬೇಡಿ – ಕೋಳಿ ಪಂಚಾಂಗ, ಬಾಳ್ಕಟ್ಟ್ ಅವನ ಜೋಬಿಲುಟ್ಟು.

**ಸೀನಪ್ಪ** : ಕುಟ್ಟಿಕೆ ಬಂದ ಕಾಯ್ಗಳ ಒಡೆಕೆ ಸೂರಪ್ಪ ಹಿಡ್ಕೊಂಡೊಳಲ್ಲ ಆ ಒಂದೇ ಕಾಯಿ ಸಾಕ್.

**ಕುಕ್ಕ** : ಹೋ – ನಾ ನೋಡ್ತ್‌ಲ್ಲೆ – ವಸ್ತ್ರಲಿ ಸುತ್ತಿಕೊಂಡೊಳ – ನೆನ್ನೆ ಏಸ್ ಕಾಯಿ ಸಿಕ್ಕಿತ್ ಸೂರಪ್ಪಣ್ಣ.

**ಸೂರಪ್ಪ** : ಇಲ್ಲೆಪ್ಪ – ಬರೇ ಐವತ್ತ್.

**ಕುಶಲ** : ಸಾಕಲೆ – ಎಲ್ಲಿದ್‌ಯಾ ನಿನ್ನ ಆ ಕಾಯಿ. ಪಗರ್ಸಿ ಕುಟ್ಟಿರೂ ನಿಂಗೇ ಸಿಕ್ಕಿದೆ ಗಡ.

**ಸೂರಪ್ಪ** : ಅದ್ ಎಲ್ಲಿದ್‌ಂತ ನಾ ಹೇಳಿಕಿಲ್ಲೆ. ಬಾರೀ ದೂರಂದ ತಂದದ್.

**ಕುಶಲ** : ಆತ್ ಹೇಳ್ಬೇಡ – ಜಾತ್ರೆ ಅಡ್ಡಕ್ಕೆ ನೆರಳ್ ಬಾಕೆ ಆತ್ – ಹೋಗಿ – ಕುಕ್ಕ ನಾವು ಎದ್ರುಮೊಯ *(ಹೋಗುವವರಲ್ಲಿ)* ಇಂದೆನಿ – ನಿಮ್ಮಲ್ಲಿ ಬೆಂಕಿ ಕಡ್ಡಿಪೆಟ್ಟಿಗೆ ಇದ್ದರೆ ಕೊಡಿ. ಬೀಡಿ ಎಳೆದೆ ಬಾರಿ ಹೊತ್ತಾತ್.

**ಸೀನಪ್ಪ** : ಇಲ್ಲೆಣ್ಣ. ಪೆಟ್ಟಿಗೆ ಖಾಲಿ. ತುಂಡು ಬೀಡಿ ಮಾತ್ರ ಕೆಬಿಲುಟ್ಟು ನೋಡಿ.

**ಸೂರಪ್ಪ** : ನನ್ನೊಟ್ಟಿಗೆ ಅದ್‌ೇ ಇಲ್ಲೆ – ಇದ್ದರೆ ಒಂದ್ ಇತ್ತ ಕೊಡಿ. ಕಾಯಿ ಕುಟ್ಟಿಕೆ ಮೊದ್ಲು ದಮ್ಮ್ ಎಳ್ದ್ ಬುಟ್ನೆ.

**ಕುಕ್ಕ** : ಏನಿಯ ಸೀನಪ್ಪ ಕಾಲ್ಗಂಟೆಗೆ ಬಟ್ಟೆ ಕಟ್ಟ್ಯೊಳ. ಸೂರಪ್ಪನ ಬೆರಳಿಗೆ ಬಟ್ಟೆ ಸುತ್ತಿಕೊಂಡುಟ್ಟು. ಏನಾತ್ ನಿನ್ನೆ.

**ಸೀನಪ್ಪ** : ಏನಿಲ್ಲೆ. ಕೋಳಿ ಬುಡುಕನ ಬಾಳ್ ತಾಂಗಿದ್ದ್ – ಶೂರಪ್ಪ ಕ್ಯಾ ಕುಟ್ಟ್‌ಕನ ಬೆರಳಿಗೆ ಗಾಯ ಆದ್ದ್.

**ಕುಶಲ** : ಈ ಪೆಟ್ಟಿಗೆ ಬಟ್ಟೆ ಕಟ್ಟಿಕಂಡ್ ಹೊರಟೊಳೊರಿ – ಕಟ್ಟಿಕೆ ಕುಟ್ಟಿಕೆ ಆದೆಯಾ ಇಂದ್.

**ಸೀನಪ್ಪ** : ಆಗದ್ದರೆ ದೂರಂದ ನೋಡಕ್ಕಲೆ. ಬಾಳ್ ಸುತ್ತಿಕೆ ಬಾಕೆ ಹೇಳ್ಯೊಳೊ ನಮ್ಮವು.

**ಸೂರಪ್ಪ** : ಕಾಯಿ ತಾಕೆ ನಮ್ಮ ಸಣ್ಣಣ ಹೇಳ್ಯುಟ್ಟು. ಬಂದವೆ *(ಇಬ್ಬರೂ ಹೋಗುವರು – ಆ ಕಡೆಯಿಂದ ತುಸು ಹೊತ್ತಲ್ಲಿ ರಾಂಪನ ಪ್ರವೇಶ.)*

**ಕುಶಲ** : *(ಕುಕ್ಕ ಕುಶಲರು ಎದ್ದು ನಿಲ್ಲುತ್ತ)* ಇಂದಯ ಕುಕ್ಕ ! ಅಲ್ಲಿ ಯಾರ್ ಬಂದವೆ ನೋಡ್ – ನಮ್ಮ ರಾಂಪ ಮಾವನೊ – ಸರೀ ಆತ್ – ಅವು ಹೋಕನ ಇವು ಬಂದವೆ. ಈ ಕಟ್ಟೆಲಿ ಕುದ್ದರೆ ತೊಂದರೆ ಇಲ್ಲೆಯ – ಜನ ಬಂದವೆ ಹೋದವೆ *(ರಾಂಪ ಸಮೀಪಿಸಲು)* ಹೋ ! ಬನ್ನಿ ಮಾವ.

**ಕುಕ್ಕ** : ಸಣ್ಣಪ ಜಾತ್ರೆಂದ ಬಾವುದಷ್ಟೆ ಕಂಡದೆ.

**ರಾಂಪಣ** : *(ಬರುತ್ತಾ)* ಯಾಕೆ ಎದ್ದದ್ದ್ ? – ನಾ ಬಾಕನ ನೀವು ಎದ್ರೊಕೂಂತ ಇಲ್ಲೆ – ಸಂತೋಷ – ಈಗನ ಮಕ್ಕ ಹಿರಿಯವ್ಕೆ ಹೀಂಗೆ ಯಾರ್ ಮರ್ಯಾದಿ ಕೊಟ್ಟವೆಂತ ಹೇಳಿ.

**ಕುಶಲ** : ಇಲ್ಲೆ ಮಾವ – ನಾವು ಹೊರಟೊವು.

**ರಾಂಪಣ್ಣ** : ಕುದ್ರಿಯಾ – ನಾ ಕೂಡ ಅತ್ತ ಬಾಂವ – ಒಸಿ ಕುದ್ದ್ ಮಾತಾಡಿ ಪೋಯಿ.

**ಕುಕ್ಕ** : *(ಮತ್ತೆ ಕುಳಿತುಕೊಳ್ಳುತ್ತ)* ಆತ್ ಸಣ್ಣಪ. ನಿಮ್ಮ ಕಾಣದೆ ಬಾರಿ ದಿನಾತ್. ಮನೆಲಿ ಅಣ್ಣ ಹೇಂಗುಟ್ಟು.

**ರಾಂಪ** : ತೊಂದ್ರೆಲ್ಲೆ. ಈಗ ಅತ್ತಿತ್ತ ನಡ್ಡದೆ. ಆದರೆ ನಿಮ್ಮ ಆಟಕ್ಕೆ ಈ ವರ್ಷ ಆಕಿಲ್ಲೆ. ಅಂವ ಹೊರ್‌ಟರೂ ನಾ ಬುಡ್‌ಕಿಲ್ಲೆ – ಮನೇಲಿದ್ದರೂ ಆಟದ ಹುಚ್ಚು ಅವ್ನ ಎಳ್ದದೆ. ತರಿಕಿಟ ಕಿಟತಕಂತ ಕುದ್ದಲ್ಲೇ ಕಾಲ್ ಆಡ್ಸಿದೆ. ಮೊರ್ಲ್ಲ್ – ನೋಡ್ಯೊಳೊರಿ ಈಗ ಆ ಸೀನ ಸೂರಪ್ಪ ಕೈಕಾಲಿಗೆ ಬಟ್ಟೆ ಸುತ್ತಿಕಂಡ್ ಹೊರ್ಟದ್ದ್, ನಿನ್ನೆ ಆದ್ದರ ಮರ್ತ್ ಇಂದ್ ಹೊರ್ಟೊಳೊ – ಕೋಳಿ ಕಟ್ಟಿಕೆ – ಕ್ಯಾ ಕುಟ್ಟಿಕೆಂತ.

**ಕುಶಲ** : ನಾವು ಕೇಳ್ಕನ ಅವು ಸರಿ ಹೇಳ್ತ್‌ಲ್ಲೆ – ಏನಾತ್ ಮಾವ ನಿನ್ನೆ.

**ರಾಂಪ** : ನಾ ನಿನ್ನೆ ಅಲ್ಲೆ ಇದ್ದ್ ನೋಡ್ದಂವ. ನಮ್ಮ ಸೀನಪ್ಪ ಕದ್ದ್ ಇದಿರ್ ಕೋಳಿನ ಕೋಪಿಗೆ ಬಾಳ್‌ಕಟ್ಟುದರ್ಲಿ ನಿಸ್ಸೀಮ. ನಿನ್ನೆ ಇವನ ಇದಿರ್ ಕೋಳಿಗೆ ಬಾಳ್ ಕಟ್ಟಿದಂವ ಇವಂದ ಕದೀಮ. ಕೋಳಿ ಬುಟ್ಟು ಹಿಡೆಕನ ಸೀನಪ್ಪನ ತೊಡೆಗೆ ಬಾಳ್ ತಾಗದ್ದ್ ಮಣ್ಯ. ಅದ್ ಕಾಲಿಗಾತ್. ಮತ್ತೆ ಸೂರಪ್ಪ ಉಟ್ಟಲೆ ಕಾಯಿ ಕುಟ್ಟ್‌ಕನ ಕಾಯಿನ ತಿರ್‍ಪಿ ಇದಿರ್ ಕಾಯಿ ಪೆಟ್ಟ್ ತಪ್ಸುದ್ರಲ್ಲಿ ಉಸಾರ್. ನೆನ್ನೆ ಇವನ ಎದ್‌ರ್ ಕಾಯಿ ಹಿಡ್ದಂವ ಇವಂದ ಚಾಲಾಕಿ. ಅವನ ಕಾಯಿ ಇವನ ಕ್ಯಾ ಬದ್ಲ್ ಬೆರಳಿಗೆ – ಹೋಗಲಿ ಪಂದ್ಯಲಿ ಯಾರ್ ತಂತ್ರ ಮಾಡಿಕಾಗದ್ – ಮಾತಾಡಿಕಾದೆಯೊ ? ತಪ್ಪು ನಮ್ಮದೇ ಇರ್ಕನ – ಹೋಗಲಿ – ನೀವಿಬ್ಬರ್ ಯಾಕೆ ಕೋಟಿ ಚೆನ್ನಯರ ಹಾಂಗೆ ಈ ಕಟ್ಟೆಲಿ ಕುದ್ದದ್. ನಟ್ಟ ಮಧ್ಯಾನ್ನ ಇಲ್ಲಿ ಗುಳಿಂಜ ಸಂಚಾರ ಉಟ್ಟುಗಡ – ಮಂಗ್ಲಾರ, ಐತಾರಂತು ಇಲ್ಲಿ ಯಾರ್ ಈ ಹೊತ್ತ್ ಕುದ್ರುದುಲ್ಲೆ.

**ಕುಶಲ** : ನೀವು ದೂರಂದ ನಮ್ಮ ಕೋಟಿ ಚೆನ್ನಯರಂತ ಗ್ರೇಸಿದರ್‍ಯೋ ಹೇಂಗೆ ?

**ರಾಂಪ** : ಫಕ್ಕನೆ ನಿಮ್ಮ ನೋಡ್ಕನ ಅವರ ನೆಂಪಾತ್. ನೋಡಿ ಅವು ಪರ್ಮಲೆಂದ ಹೊರಟ್ ಪಂಜಕ್ಕೆ ಹೋದ ದಾರಿ ಇದ್. ಈ ಕಟ್ಟೆಲಿ ಕುದ್ದೊಳೊಂತ ಹೇಳ್ವೆ.

**ಕುಕ್ಕ** : ಆ ಕಾಲಲೇ ಇಲ್ಲಿ ಈ ಕಟ್ಟೆ ಇತ್ತೋ ಸಣ್ಣಪ.

**ರಾಂಪ** : ಅವೇ ಈ ಮರ ನೆಟ್ಟೊ – ಕಟ್ಟೆಕಟ್ಟಿದೊಂತ ನಂಬಿವೆ. ಅವು ಅಸ್ಟ್ ಕಾರ್ಣಿಕದವು. ಅವು ನೆಟ್ಟ ಈ ಮರ ಈ ಕಟ್ಟೆ ಈಗಳೂ ಉಳ್ದುಟ್ಟು.

**ಕುಶಲ** : ಮಾವ ! ನಿಮ್ಗೊಟ್ಟಿಗೆ ಕೇಳಿಕಾಗದ್. ಬೀಡಿ ಎಳೇಕೆ ಬೆಂಕಿಪೆಟ್ಟಿಗೆ ಇಲ್ಲೆ. ಯಾರ್ ಬಂದವೆಂತ ನಾವು ಕುದ್ದು ಕಾಯುದು.

**ರಾಂಪ** : ಇಲ್ಲೆಲೆ. ನಾ ಬೀಡಿ ಎಳ್ಯೋದು ನೀವ್ ನೋಡ್ಯೊಳೊರೊ – ವೀಳ್ಯ ಉಟ್ಟು ಕೊಟ್ನೆ. ಮಕ್ಕ ಬೀಡಿ ಎಳೇಕಾಗದ್. ಎದೆ ಗೂಡು ಕಟ್ಟಿದೆ. ವೀಳ್ಯ ತೊಂದ್ರೆ ಇಲ್ಲೆ *(ವೀಳ್ಯದ ಸಂಚಿ ಬಿಚ್ಚುತ್ತ)* ಮೊದ್ವೆ ಆವ ಹ್ಯೆದಂಗ ಬೀಡಿ ಎಳ್ಯೋದರ ಬುಟ್ಟು ಒಂದು ಮೊದ್ವೆ ಆಕು – ಮೊದ್ವೆ ಆಗಿ ಹೆಣ್ಣ್ ವೀಳ್ಯ

ಮಡ್ಸಿ ಕೊಟ್ಟರೆ ಅದರ ರುಚಿನೇ ಬೇರೆ. ನೀ ಯಾಕೆಯ ನನ್ನ ಮಾವಂತ ಬಾಯಿಲಿ ಮಾತ್ರ ಕರೀದು.

**ಕುಕ್ಕ** : ಕುಸಲ ನಿಮ್ಮ ಮಗ ತಿಮ್ಮಕ್ಕನ ಮೊದ್ವೆ ಆಕೆ ತಯಾರುಟ್ಟು ಸಣ್ಣಪ. ಆದರೆ

**ರಾಂಪ** : ಯಾಕೆ ಆದರೆ – ನಮ್ಮ ಗೂಡೆಗೂ ಮನ್ಸುಟ್ಟು. ನಾನೂ ತಯಾರೊಳೆ.

**ಕುಕ್ಕ** : ಕುಸಲ – ಅವನಪ್ಪ ಒಪ್ಪಿರೂ ಅಯ್ಯೆಗೆ ಮನಸ್ಸಿಲ್ಲೆ ಗಡ.

**ರಾಂಪ** : ಯಾಕೆ ಮನಸ್ಸಿಲ್ಲೆ ಗಡ – ನೇರ ಎಲ್ಲ ಸರಿಯುಟ್ಟಲೆ ?

**ಕುಕ್ಕ** : ನೇರ ಸರಿ ಇದ್ದರೂ ನಿಮ್ಮ ಬಳಿ ಅವುಕ್ಕೆ ಆವುದಿಲ್ಲೆ ಗಡ.

**ರಾಂಪ** : ಪಡ್ಚಾತ್. ನಂದರ ಬಳಿ ಊಚ್ ಬಳಿ. ಏನಾಗುಟ್ಟು ಗಡ ನಮ್ಮ ಬಳಿಂದ ಹೆಣ್ಣ್ ಕೊಂಡೋದವಕ್ಕೆ. ಈ ಬಳಿ ಬಳೀಂತ ನಮ್ಮ ಜಾತಿ ಗೂಡೆಗ ಮೊದ್ವೆ ಆಗದೆ ಹಾಂಗೆ ಉಳಿಯಲಿ. ಹೈದಂಗೆಲ್ಲಾ ದೇವ್ರಿಗೆ ಬಿಟ್ಟ ಬಸವಗ ಯಾರ್‍ಯಾರ ಗದ್ದೆ ಮೇಯಲಿ.

**ಕುಕ್ಕ** : ಇರಲಿ ಸಣ್ಣಪ – ಮೊದ್ವೆ ವಿಚಾರ ಹೇಳ್ಕನ ನೆಂಪಾತ್. ಮೊನ್ನೆ ಮಜಲ್‌ಗದ್ದೆ ಸೋಂಪಜ್ಜನ ಮನೆಗೆ ಗೂಡೆ ನೋಡಿಕೆ ಬಂದಿದ್ದೊ ಗಡ! ಏನಾತ್ ?

**ರಾಂಪ** : ನಾನೇ ಅಲ್ಲ ಆ ನೆಂಟ್ರ ಕಳ್ಸಿದ್. ಅದರ ಕತೆ ಪೊರ್ಲುಟ್ಟು, *(ಹೊಗೆಸೊಪ್ಪು ತುಂಡರಿಸಿ ಅದಕ್ಕೆ ಸುಣ್ಣ ಹಚ್ಚಿ ಬೆರಳಲ್ಲಿ ತಿರುವುತ್ತ)* ಈ ಹೊಸೊಪ್ಪು ನಾ ಇಸ್ಟ್ ತಿಂದನೇಂತ ನೀವ್ಹೂ ಈಸ್ ಬಾಯ್ಗೆ ಹಾಕ್ಬೇಡಿ – ಒಸಿ ಇನ್ನೂ ಒಸಿ. ಜಾಸ್ತಿ ತಿಂದರೆ ಎಂಥಾ ಜವನ ಆದರೂ ತೂರುವ್ರೊ. ಇದ್ ಕುಣಿಯ. ಇಲ್ಲಿದ್ ಪ್ರಯೋಜನ ಇಲ್ಲೆ. ನಾನು ಸುಳ್ಯ ಕೆಲ್ಸಿಕಟ್ಟೆ ಬ್ಯಾರಿ ಅಂಗ್ಡಿಂದ ತಾವುದು.

**ಕುಶಲ** : ಇರಲಿ ಮಾವ ಗೂಡೆ ನೋಡಿಕೆ ಹೋದ ಕತೆ ಬುಟ್ಟು ಹೊಸೊಪ್ಪಿನ ಕತೆ ಹೇಳ್ರೆಲ್ಲ.

**ರಾಂಪ** : *(ಹೊಗೆಸೊಪ್ಪು ಬಾಯಿಗೆ ಹಾಕಿ)* ಹಾಂ – ಹಾಂ – ನಾ ಮಾತಾಡಿಕೆ ಸುರುಮಾಡಿರೆ ಹಾಂಗೆ. ಎಲ್ಲೆಲ್ಲೊ ಹೋನೆ. ಅದರ್ನೇ ಹೇಳ್ನೆ. ನಾ ಗೂಡೆ ಮನೆಗೆ ಅವರೊಟ್ಟಿಗೆ ಜತೆ ಹೋತ್‌ಲ್ಲೆ. ಹೋದ್ ಮೊದ್ವೆ ಆವ ಮಂಜನೂ ಅವನ ಅಪ್ಪ. ಇಬ್ಬರೇ.

**ಕುಶಲ** : ಆದರೆ ಸಂಮಂದ ನಿಮ್ಮಂದ ಆಗಿರ್ಕನ ನೀವು ಹೋಕಾಗಿತ್ತ್. ಅಲ್ಲಿ ಗೂಡೆ ಮನೆಲಿ ಕೋಳಿ ರೊಟ್ಟಿ ತಿಂದ್ ಬರಕಾಗಿತ್ತ್.

**ರಾಂಪ** : ಹೋಕಿತ್ತ್ – ಬಂದದ್ ಅವಿಬ್ಬರೆ. ನಾ ಸೇರಿರೆ ಮೂರಾದೆ – ಮೂರು ಜನ ಶುಭ ಕಾರ್ಯಕ್ಕೆ ಹೋವುದು ಸರಿಯಲ್ಲಂತ ನಾ ಬಾಕಿ ಮಾಡ್ದ್. ಹೊಸ ನೆಂಟ್ರಿಗೆ ಮನೆ ತೋರ್‍ಸಿ ನಾ ಮನೆಗೆ ಬಂದೊಳೆ. ಇಂದ್ ನೆಂಟ್ರ್ ಬಂದವೆಂತ ಅಲ್ಲಿಗೂ ಹೇಳ್ಯೊಳೆ. ಆದರೆ...

**ಕುಕ್ಕ** : ನೆಂಟ್ರ್ ಹೋತ್‌ಲ್ಲೆ ಅಲ್ಲಿಗೆ

**ರಾಂಪ** : ಹೋಗೊಳೊ. ರಾಂಪ ಗೌರು ಹಕ್ಕಲೆ ರೊಟ್ಟಿ ಮಾಡಿಕೆ ಹೇಳಿ ಕೋಳಿ ಕೊಂದ್ ಹಾಕಿ ಕಳ್ಳ್ ತಾಕೆಂತ ಗುತ್ತಿಗೆಗೆ ಹೋಗುಟ್ಟು. ಅಷ್ಟೊತ್ತಿಗೆ ನೆಂಟ್ರ್ ಹೋದೊ.

**ಕುಶಲ** : ನೆಂಟ್ರ್ ಎಲ್ಯವು ಮಾವ ? ಹೈದ ಹೇಂಗುಟ್ಟು ?

**ರಾಂಪ** : ಕಡಬ ಕಡೆವು. ದೂರಲಿ ನಂಗೂ ನೆಂಟ್ರಾಕ್ಕು – ಹೈದಂಗೆ ಕಾಲ್ ಒಸಿ ಜಳ್ಳೆ. ಮತ್ತೇನಿಲ್ಲೆ.

**ಕುಕ್ಕ** : ಹೈದನ ಗೂಡೆ, ಗೂಡೆನಯ್ಯೆ ಒಪ್ಪಿದೊ

**ರಾಂಪ** : ಒಪ್ಪದ್ರೆ ಹೋಗಲಿ. ಬಂದವಕ್ಕೆ ಊಟನಾದ್ರ್ ಮಾಡಿ ಕಳ್ಸೊಕಲೆ. ಸೋಂಪ ಗುತ್ತಿಗೆಂದ ಕುದ್ರೆ ನೇಲ್ಸಿಕಂಡ್ ಬಾಕನ ನೆಂಟ್ರ್ ಹೊರಟೋಗೊಳ ಗಡ.

**ಕುಶಲ** : ಗೂಡೆ ಆಕಿಲ್ಲೆ. ಇನ್ನ್ ಊಟ ಮಾಡುದು ಯಾಕೇಂತ ಹೊರಟಿರೋಕು.

**ರಾಂಪ** : ಇಲ್ಲೆಪ್ಪ. ಸೋಂಪ ಮನೆ ಮೆಟ್ಲ್ ಹತ್ತಿ ಕೇಳ್ತ್ ಗಡ. ನೆಂಟ್ರ್ ಬಂದ್ರೊ? ಗೂಡೆನ ನೋಡ್ದೊ ಅಂತ. ಗೌರು ಹೇಳ್ತ್ ಗಡ. ನೆಂಟ್ರ್ ಬಂದೊ. ಬಂದ ನೆಂಟ್ರ್ ಗೂಡೆನ ನೋಡೋದ್ರ ಬದ್ಲ್ ಅ ಗೋಡೆಲಿ ನೇಲ್ಸಿಕಂಡ್ ಉಟ್ಟಲೆ ಆ ಪಯ್ಯಲಿ ಸೂಡಿ ಬೆತ್ತನ ನೋಡ್ದೊ. ನೋಡಿ ಅದರ್ನೇ ಕೇಳ್ದೊ. ನಾ ಹೇಳ್ದೆ. ಗೂಡೆನ ಕೇಳಿಕೆ ಬಂದವು ಯಾರ್ ಅದ್ರ ಕೇಳ್ತ್‌ಲ್ಲೆ. ನೀವು ಕೇಳಿರೆ. ಅದ್ ನನ್ನ ಗಂಡಂದ್. ಅವ್ರು ಈಗ ಬಂದವೆ. ಕೇಳಿ. ಕೊಡಿಕೆ ಸಾಕ್‌ಂತ. ಈಸ್ ಹೇಳ್ಕನ ಕೋಪಲಿ ಥಟ್ಟಂತ ಎದ್ದೊ. ನಿಮ್ಮ ಬೆತ್ತನೂ ಬೇಡ ಗೂಡೇನೂ ಬೇಡಾಂತ ಪಿಸ್‌ರ್ಲಿ ಅಂಗಳಕ್ಕಿಳ್ದ್ ಹೋದೊ – ನೋಡಿ ಅಲ್ಲಿ ಮಜಲಲ್ಲಿ ಹೋದವೆಸ್ಟೆ – ತಿರ್ಗಿಸಾ ನೋಡುದಿಲ್ಲೆ – ಎಂಥ ಕೋಪ ನೆಂಟ್ರ್‌ದ್‌ಂತ. ಏನ್ ನೋಡ್ತಾ ಒಳರಿ. ತಕಣಿ ಆ ಅಡ್ಡಣ ಬೆತ್ತ – ಕೊಟ್ಟನೆ ಅಂತ ಅವರ ಕರ್ದ್ ಹೇಳಿ – ಅಲ್ಲಿ ಹೋದವೆ – ಹೋಗಿ ಹೋಗಿ ಓಡ್ಕೊಂಡು ಹೋಗಿಂತ ಹೇಳ್ತ್. ಪೆದ್ದ ಸೋಂಪ ಸತ್ಯ ನಂಬಿ ಅಡ್ಡಣಬೆತ್ತ ಹಿಡ್ಕಂಡ್ ನೆಂಟ್ರ ಕರ್ದ್‌ಕರ್ದ್ ಅವರ ಹಿಂದೆ ಓಡ್ತ್‌ಗಡ *(ಕಟ್ಟೆಯಿಂದ ಎದ್ದು ಗಟ್ಟಿದನಿಯಲ್ಲಿ ಕರೆದು ಅಭಿನಯಿಸುತ್ತ)* ಓ ನೆಂಟ್ರೆ – ನಿಲ್ಲಿ – ನಿಲ್ಲಿ ನಿಲ್ಲಿಂತ ಮಜಲಲ್ಲಿ ಬೆತ್ತ ಹಿಡ್ದ್ ಓಡ್ತ್‌ಗಡ. ನೆಂಟ್ರ್ ಸೋಂಪನ ತಿರ್ಗಿತಿರ್ಗಿ ನೋಡಿಕಂಡ್ ಓಡಿದೊ ಗಡ.

**ಕುಶಲ** : ಯಾಕೆ ಹೀಂಗಾತ್ – ಇದರ್ಲಿ ಯಾರೊ ಒಳ್ಳೆ ಕಸ್ರತ್ ಮಾಡ್ಯೊಳೊ.

**ಕುಕ್ಕ** : ಯಾರ್‍ಯಾರ್ ಯಾಕೆ ? ಗೂಡೆ ಮತ್ತ್ ಗೂಡೆನ ಅಯ್ಯೆನೇ ಇರೊಕು. ನೆಂಟ್ರ್ ಯಾಕೆ ಪಿಸ್‌ರ್‌ಲಿ ಹೋದೊಂತ ಗೌರಜ್ಜಿನ ನೀವ್ ಕೇಳ್ತ್‌ಲ್ಲೆ?

**ರಾಂಪ** : ಕೇಳಿರೆ ಅದ್ ಸತ್ಯ ಹೇಳುದೊ. ಆದರೆ ಎರಡ್ಡಿನ ಕಳೇಕನ ಎಲ್ಲಾ ಗೊತ್ತಾತ್.

**ಕುಸಲ** : ಏನ್ ಮಾವ – ಯಾರದ್ ಕಸ್ರತ್ ?

**ರಾಂಪ** : ಕುಕ್ಕ ಹೇಳ್‌ದಲ್ಲೊ – ಅದೇ ಗೂಡೆ ಮತ್ತೆ ಗೂಡೆನಯ್ಯೆದ್ – ಮೊನ್ನೆ ನಮ್ಮ ಗೂಡೆ ಕಜೆಗದ್ದೆಗೆ ಸೋಬಾನೆ ಕಲೆಕೆ ಹೋಕನ ಅಲ್ಲಿ ಹೆಮ್ಮಕ್ಕ ಎಲ್ಲಾ ಗುಸುಗುಸು ಮಾತಾಡ್ತಿದ್ದೊ ಗಡ.

**ಕುಶಲ** : ಹೆಮ್ಮಕ್ಕಳೊಟ್ಟಿಗೆ ಗುಟ್ಟು ಉಳಿಯದ್. ಏನದ್ ಹೇಳಿಬುಡಿ ಪಕ್ಕ.

**ರಾಂಪ** : ಹೇಳ್ನೆ. *(ಬಾಯಲ್ಲಿರುವ ತಾಂಬೂಲ ಉಗಿದು ಬಂದು)* ಸೋಂಪ ಕಳ್ಳ್ ತಾಕೆ ಅತ್ತ ಹೋಕನ ಇತ್ತ ಗೌರು ಬಾವ ನೆಂಟರ ಹೇಂಗೆ ಓಡ್ಸುದಂತ ಯೋಚನೆ ಮಾಡ್ತ್. ಸೋಂಪನ ಗೂಡೆ ಅವನ ಹೆಣ್ಣಿಂದ ಜೋರು. ಅಯ್ಯೆ ಗೆಲ್ಲ್‌ಲಿ ಹೋದರೆ ಇದ್ ಎಲೆಂದ ಎಲೆಗೆ ಹಾರ್ದಂತ ಊರಿಗೇ ಗೊತ್ತುಟ್ಟಲೆ. ಅಯ್ಯೆಗೆ ಹೀಂಗೆ ಮಾಡುಮೊಂತ ಉಪಾಯ ಹೇಳ್ಕೊಟ್ಟತ್ತ್. ಅಯ್ಯೆ ಮಗ ಕೂಡಿ ಜಗಲಿ ಗೋಡೆಲಿ ನೇಲ್ಸಿದ ಪ್ಯಯಲಿ ಅಡ್ಡಣಕ್ಕೆ ಸರಿ ಸುಣ್ಣದ ಬೊಟ್ಟು ಹಾಕಿದೊ. ಬೆತ್ತಕ್ಕೆ ಹೂಮಾಲೆ ಮಾಡಿ ಕಟ್ಟಿದೊ – ಅದಿಕ್ಕೆ ಊದುಬತ್ತಿ ಹೊತ್ತಿಸಿಟ್ಟೊ. ಅಷ್ಟೊತ್ತಿಗೆ ನೆಂಟ್ರ್ ಬಂದೊ. ಗೂಡೆ ಒಳಗೆ ಹೋತ್. ಗೌರು ನೆಂಟ್ರಿಗೆ ಹಸೆ ಹಾಸಿ ನೀರ್ ತಾತ್. ಅವರೆದ್ರೆ ಅಡ್ಡಣ ಬೆತ್ತಕ್ಕೆ ಮತ್ತೊಂದು

ಊದುಬತ್ತಿ ಹೊತ್ತಿ ಇಟ್ಟ್ ಕೈ ಮುಗಿತ್. ಇದರ ನೋಡ್ತಾ ಇದ್ದ ನೆಂಟ್ರೊಟ್ಟಿಗೆ ಹೇಳ್ತ್. ನಂಟ್ರೆ ನಿಮ್ಮೊಟ್ಟಿಗೆ ಹೇಳಿಕೆ ಬೇಜಾರಾದೆ. ಹೇಳದೆ ನಿಮುರ್ತಿ ಇಲ್ಲೆ. ಇದ್ ನಮ್ಮ ಕಲ್ಲುರ್ಟಿ ಭೂತದ್ – ಬಾರಿ ಕಾರ್ಣಿಕದ್. ಇಂದ್ ಬೊಳ್ಪಿಗೆ ನಮ್ಮ ಗೂಡೆನ ಮೈಗೆ ಬಂದ್ ಕತ್ತಲೆಗೇ ಕೋಲ ಕೊಟ್ಟೇ ತೀರೊಕೂಂತ ಹೇಳುಟ್ಟು. ಅದಕ್ಕೆ ಗೂಡೆನಪ್ಪ ಮಿಂದ್ ಬಾಕೆ ಹೋಗೊಳೊ – ಈಗ ಬಾವ್ರೊ – ಬಾಕನ ದರ್ಶನಲೆ ಬಂದವೆ. ಬಂದ್ ಇದೇ ಬೆತ್ತಲಿ ಹೊಡ್ಕೊಂಡವೆ – ಎದ್‌ರ್ ಸಿಕ್ಕವ್ರೂ ತಾರಾಮಾರ. – ಮೊನ್ನೆ ಬಂದ ನೆಂಟ್ರಿಗೂ ಪೊಳಿ ಬಿದ್ದುಟ್ಟು – ಹೀಂಗೆ ಗೌರು ಹೇಳ್ಕನ ಬಂದ ನೆಂಟ್ರ್ ನೀರ್ ಮುಟ್ಟದೆ ಅಂಗಳಕ್ಕಿಳ್ದೊ – ಆ ಹೊತ್ತಿಗೆ ಸೋಂಪನೂ ಗುತ್ತಿಗೆಂದ ಬಾತ್ – ಮತ್ತೆನ ಕತೆ ಆಗಲೇ ಹೇಳ್ಯೊಳೆ – ಕತೆ ಮುಗ್ತ್. ಎದ್ರಿ ಪೋಯಿ ಹೊತ್ತಾತ್.

**ಕುಕ್ಕ ಕುಶಲ** : *(ಏಳುತ್ತಾ)* ಪೋಯಿ ಪೋಯಿ. ಇಂಥ ಕತೆ ಕೇಳ್ರೆ ಮೂರು ದಿನದ ದೇವಿ ಮಹಾತ್ಮೆ ಆಟ ನೋಡೊಕು. *(ಎಲ್ಲರೂ ಒಂದೇ ದಿಕ್ಕಿಗೆ ಹೋಗುವರು)*

## ಬೊಳ್ಳಾಕನ ಮುಗ್ತ್

6

*(ಸೋಂಪನ ಮನೆ ಜಗಲಿ. ಬೆಂಚಿನಲ್ಲಿ ಕಾಲು ಚಾಚಿ ಗೌರು ಪಕ್ಕದ ಮಡಪಾಲೆಯಿಂದ ಒಂದೊಂದೇ ಹೂಗಳನ್ನು ಹೆಕ್ಕಿ ಕಟ್ಟುತ್ತಿದ್ದಾಳೆ)*

**ಗೌರು** : *(ಹೊರ ಅಂಗಳದತ್ತ ನೋಡುತ್ತ)* ಬಂದೊ – ಬಂದೊ. ಇದರ ಎಷ್ಟ್ ಬೆರ್ಸಿರೂ ಇಲ್ಲೆ. ಬಾವುದೇ ಒಳಕ್ಕೆ – ಕೋಳಿ ಹೇಲ್ ತೆಗ್ದ್ ತೆಗ್ದ್ ಸಾಕಾತ್ *(ಗಟ್ಟಿಯಾಗಿ ಕೈ ಬೀಸಿ)* ಸುವ್ವೇ – ಕಾಪು ಇಳ್ಸಿ ಒಂದು ವಾರ ಆತಷ್ಟೆ – ನಿಂಗೆ ಅಂಗ್ಳಲಿ ಏನ್ ತಿಂಬಕಿಲ್ಲೆ? ಮರಿಗಳ ತಕಂಡ್ ಬಾ ಒಳ್ಗೆ. – ನಿನ್ನ ಪೊಜೆಂಕ್ಕಿನೆ *(ಒಳಗೆ ಮುಖ ತಿರುಗಿಸಿ)* ಂದಾ ಮಗಾ – ಮೋಂಟಿ ಏನ್ ಮಾಡ್‌ಯಾ ಒಳಗೆ ? ಒಮ್ಮೆ ಈ ಹೇಂಟೆನ ದೂರ ಬೆರ್ಸ್. ಏನ್ ಆತ್‌ಲ್ಲೆ ನಿನ್ನ ಸಿಂಗಾರ? ಒಳಗೆ ತಲೆ ಬಾಚಿಕಾಗದ್ – ಏನ್? ಮೊನ್ನೆ ಸಂತೆಂದ ತಂದ ಬಳೆ – ಬೊಟ್ಟ್ ? ಅದ್ ಸೀರೆ ಪೆಟ್ಟಿಗೆಲಿ ಕನ್ನಡಿ ಕರಡಿಗೆಲಿ ಉಟ್ಟು *(ಗಟ್ಟಿಯಾಗಿ ಮತ್ತೊಮ್ಮೆ)* ಸುವ್ವೇ – ನಿನ್ನ ಕುದ್ಕ ಹೊರೀಕೆ – ಥೂ – ಎಷ್ಟ್ ಹೊತ್ತಾತ್ ಹೂ ಕಟ್ಟಿಕೆ ಕುದ್ದು – ಸೊಂಟ ಸೋಬಾನೆ ಆದೆ. ಈ ಸಂಜೆಮಲ್ಲಿಗೆ ಮುಗ್ಗು ಮಧ್ಯಾಹ್ನಕೆ ಮುಂದೆನೇ ಕೊಯ್ದಿಡೊಕ್‌ಯಾ – ಈಗ ಅರಳಿ ಕಟ್ಟಕಾದೆಯೊ. ಆತ್ ನಿನ್ನದ್ ದೊಡ್ಡದೊಂದಾಗುಟ್ಟು. ಸುಡಲಿ. ಇನ್ನ್ ಸಾಕ್. *(ಕೈಯಲ್ಲಿರುವ ಸಣ್ಣ ಮಾಲೆಯನ್ನು ಎತ್ತುತ್ತ)* ನಂಗೆ ಸಣ್ಣದ್ ಈಸ್ ಸಾಕ್. ಂದಾ ನಿನ್ನದರ *(ಎನ್ನುತ್ತ ದೊಡ್ಡ ಮಾಲೆಯನ್ನು ಒಳಗೆ ಕೊಂಡುಹೋಗಿ ಮತ್ತೆ ಹೊರಬರುತ್ತಾ)* ಇದೆಲ್ಲ ಹೇಳಿಕೊಟ್ಟು ಬಾವುದಲ್ಲ – ಮನಸ್‌ಲಿ ಹುಟ್ಟೊಕು. ಸರ ಇಲ್ಲೆ ರವಿಕೆ ಇಲ್ಲೆಂತ ಇಲ್ಲಿ ನನ್ನೊಟ್ಟಿಗೆ ಹೇಳ್ಯ. ಸಂತೆಲಿ ನಂಜನ ಜತೆ ತಿರ್‌ಗ್‌ಕನ ಅಲ್ಲಿ ಅವಂದ ತೆಗ್ದ್‌ಕೊಡೊ ಹಾಂಗೆ ಮಾಡೊಕಾಗಿತ್. ನೋಡ್ ಗೂಡೆಗ ಹೈದಕ್ಕಳ ಹಕ್ಕಲೆ ಬಾಯ್ಬುಟ್ಟು ಕೇಳಿಕಾಗದ್. ಅವು ಕೊಡ್‌ಕನ ಬೇಡ ಬೇಡಂತ ಹೇಳೊಕು. ಹಕ್ಕಲೆ ಬಾಕನ ಒಸಿಯ

ದೂರ ದೂರ ಹೋಕು – ಹೀಗೆ ಅವರ ಹಕ್ಕಲೆ ಮಾಡೋಕು. ಗಾಳಲಿ ಮೀನ್ ಎಳ್ದವಲೆ ಹಾಂಗೆ. ಮೊದಲ್ ಕೋಪ ಬಂದಾಂಗೆ ಮಾಡೋಕು. ಮತ್ತೆ ನಗೆತಂದ್ ಬಲೆ ಬೀಸೋಕು – ಬರೇ ಅಲಂಕಾರ ಮಾಡಿಕಂಡರೆ ಸಾಲದ್ *(ಕೋಳಿಗಳತ್ತ)* ಸುವ್ವೆ – ಮತ್ತೆ ಬಾತ್ ಹೇಂಟೆ ದಂಡ್ ಕ್ವೆಕ್ ಕ್ವೆಕ್‌ಂತ *(ನೆಲದಲ್ಲಿದ್ದ ವೀಳ್ಯ ಗುದ್ದುವ ಕಲ್ಲನ್ನು ಎತ್ತಿ ಬೀಸಿ ಸೆರಗು ಸರಿಮಾಡಿಕೊಂಡು)* ಂದಾ ಇತ್ತ ಬಂದರೆ ಇಸುವೆ ಇದರ್ಲಿ ಮರಗಟ್ಟಿ ಹೋಕು *(ವೀಳ್ಯ ಗುದ್ದುವ ಉಜಡೆಕಲ್ಲಿನ ಬಳಿ ಹೋಗಿ ಎರಡು ಅಡಿಕೆ ಪೋಳುಗಳನ್ನು ತೆಗೆದು)* ಒಸಿ ಪುಡಿಮಾಡಿಕಂಡನೆ *(ಪುಡಿ ಮಾಡುತ್ತ)* ಹಸಿ ಹೋಗಿ ಇದ್ ಒಣಗಿ ಗೋಟಾಗುಟ್ಟು. ಇದರ ಪುಡಿಮಾಡಿಕೆ ಬತ್ತಪ್ಪ. ಆದರೂ ತಿನ್ನದೆ ಇರಿಕೆ ಆದೆನೊ. *(ವೀಳ್ಯದೆಲೆ ತೆಗೆಯುತ್ತ)* ಏನ್ ಒಂದೆರಡ್ ದಿನಂದ ಅಪ್ಪ ಮಂಜನ ಸುದ್ದಿನೇ ಇಲ್ಲೆ. ಬಾವ್ರೊ ನೆಂಪಾಕನ *(ನಾಯಿ ಬೊಗಳುವುದನ್ನು ಕೇಳಿ)* ಯಾರ್ ಬಂದವೆ *(ನೋಡಿ)* ಇದ್ ಅಪ್ಪ ಅಲ್ಲ. ಮಂಜ ಥೂ ಸುಟ್ಟ ನಾಯಿಗೆ ಗುರ್ತನೆ ಸಿಕ್ಕಿಕಿಲ್ಲೆ. ಬಾ ಹ್ಯೆದ *(ನಾಯಿ ಮತ್ತಷ್ಟು ಬೊಗಳಿದಾಗ)* ಸುಟ್ಟದ್ ನಿನ್ನ ಹುಲಿ ಹೊರಿಕೆ. ಬಾ ಮಂಜ. ಬಾರಿ ಅಪರೂಪ ಆದಲ್ಲೇ?

**ನಂಜ** : *(ಜಗಲಿ ಹತ್ತುತ್ತ)* ಏನ್ ಮಾಡ್ತಾ ಒಳರಿ ದೊಡ್ಡವ ? ನಿವ್‌ಗೂ ಗುದ್ದೊಕಾದೆ ಹೇಂಗೆ.

**ಗೌರು** : ಥೂ – ಎಂತ ಹೇಳಿಯಾ ಹ್ಯೆದ – ಕಡೆಹಲ್ಲ್ ಎರ್‌ಡ್ ಅಲ್‌ಗಿದೆಷ್ಟೆ. ಅಡಿಕೆ ಒಣಗಿ ಗೋಟಾಗುಟ್ಟು. ತಿನ್ನದೆ ಆದೆನಾ ಹೇಳ್.

**ನಂಜ** : ಅದ್ ಅಬ್ಬೇಸ ಅಲ್ಲೊ ದೊಡ್ಡವ – ಗುದ್ದಿ ಆದರೂ...

**ಗೌರು** : ಥೂ – ನನ್ನ ದೊಡ್ಡವಂತ ಯಾಕೆ ಕರ್ದಿಯೇನೆ ಹ್ಯೆದ. ನಾ ನಿನ್ನ ಅವ್ವನ ನೇರಲಿ ಅತ್ತೆ ಆಕು. ಅತ್ತೆ ಅಂತ ಕರಿ. ನಿನ್ನ ಅಪ್ಪನ ನೇರಲಿ ಮಾತ್ರ ಸಣ್ಣವ. ದೊಡ್ಡವ ಅಲ್ಲ. ನನ್ನ ಹಲ್ಲ್ ಗಟ್ಟಿಯಿಲ್ಲೆ. ನಿನ್ನ ಅಯ್ಯೆನ ಕೂದಲ್ ಬೆಳ್ಳಗಾಗುಟ್ಟು ಅಷ್ಟೆ – ಅದ್ ನನ್ನಂದ ನಾಲ್ಕೈದ್ ವರ್ಸಕ್ಕೆ ದೊಡ್ಡದ್. ಹೋಗಲಿ. ಇಂದ್ ಏನ್ ? ಈ ಹೊತ್ತ್. ಕತ್ತಲೆಗೆ ಬಾವ ನೀ ಹಿಂಬೊತ್ತಿಗೇ ಬಂದೊಳ.

**ನಂಜ** : ಕತ್ತಲೆಗೆ ಸಾಲೆಲಿ ತಾಳಮದ್ದಳೆ ಉಟ್ಟು ದೊಡ್ಡವ.

**ಗೌರು** : ಮತ್ತೆ ಅವ್ವಂತ ಹೇಳ್ದೆಲ್ಲ. ಅತ್ತೆಂತ ಹೇಳಿಕೆ ನಾಚಿಕೇನ ನಿಂಗೆ.

**ನಂಜ** : ಆವುದು ಅತ್ತೆ. ಹಿಂಬೊತ್ತ್ ಆದರೆ ಏನ್ ಈ ಹೊತ್ತ್ ಮಾವ ಮನೇಲಿರಿಕಿಲ್ಲೆಂತ ಗೊತ್ತು.

**ಗೌರು** : ಸರಿ. ನಿನ್ನ ಮಾವ ಈ ಹೊತ್ತ್ ಗಡಂಗಿನಲ್ಲಿರುವ್ರೊಂತ.

**ನಂಜ** : ಮಾವ ಗಡಂಗಿಲಿ ಕುಡ್ದು ಕುದ್ದವೆ. ಅಪ್ಪ ಕಾನಲ್ಲಿ ಕಡವೆಗೆಂತ ಕಾದು ಕುದ್ದವೆ. ಅಂತ್ ಇಬ್ಬರ್ ಇಲ್ಲದಿರ್ಕನ ನಾ ಬಂದದ್. ಏನ್ ಹೇಳ್ಯರಿ. ಎಲ್ಲಿ ಮೋಂಟೆ ಎಲ್ಲೂ ಕಂಡತ್ತಿಲ್ಲೆ.

**ಗೌರು** : ಅದಕ್ಕೆ ನಿನ್ನಲ್ಲಿ ಕೋಪ ಗಡ – ಬಾರೀ ಪಿಸ್‌ರ್‌ಲಿತ್ತ್. ಈಗ ಹೊರಗಿತ್ತ್. ನೀ ಬಾವುದು ನೋಡಿ ಒಳ ಓಡ್ತ್. ನೀ ನಿನ್ನೆ ಬನ್ನೆಂತ ಹೇಳ್ದ್ ಗಡ. ಪಾಪ ಗೂಡೆ ನಿನ್ನೆಂದ ಕಾಯ್ತು ಉಟ್ಟು.

**ನಂಜ** : ನಾಡ್ದ್ ಎಲಿಮಲೆಲಿ ಒಂದು ಆಟ ಉಟ್ಟಲೆ. ಅದಿಕ್ಕೆ ನಿನ್ನೆ ಸಾಲೆಲಿ ಅಬ್ಬೇಸ ಮಾಡಿಕೆ ಇತ್ತ್.

**ಗೌರು** : ನೀ ಆ ಮಂಜ ಎಲ್ಲ ಪದ ಹೇಳಿಕಂಡೇ ಮಾತಾಡ್ದು ಗಡ. ಕೊಣ್ಕೊಂಡೇ ನಡಿದು ಗಡ – ನಮ್ಮ ಮೋಂಟಿ ಹೇಳ್ದೆ. ಇಲ್ಲಿ ಬಾಕನ ಎಲ್ಲುಟ್ಟಯ ನಿನ್ನ ಪದ.

**ನಂಜ** : ಇಲ್ಲಿ ಈ ಹೊತ್ತ್ ಬಾಕನ ಪದ ಹೇಳ್ತ ಬಂದರೆ ಆವುದೋ ಅತ್ತೆ ? – ಪದದ ಬಾಯಿ ಬಂದ್ ಮಾಡ್ತ್ಯೊಳೆ.

**ಗೌರು** : ಮೋಂಟಿ ಬಾರಿ ನಾಚ್ಕೆ ಗೂಡೆಂತ ನಿಂಗೆ ಗೊತ್ತುಟ್ಟಲೆ. ಅದು ಬಾಯ್ಬುಟ್ಟು ಕೇಳದ್. ಅದ್ಕೆ ಆಟಕ್ಕೆ ಹೋಕನ ಒಂದು ಜೊತೆ ಸೀರೆ ರವ್ಕೆ ಆಕ್ಕಡ – ಎಲ್ಲಾ ಕುತ್ತಿಗೆಗೆ ಸರ ಹಾಕ್ಕಂಡ್ ಬಂದವೆ. ನಾ ಬರಿ ಕುತ್ತಿಗೆಲಿ ಎಲ್ಲಿಗೂ ಹೋದುಲ್ಲೆಂತ ಕುದ್ದುಟ್ಟು.

**ನಂಜ** : ಅಷ್ಟೆಲ್ಲ. ಅದ್ಕೆ ಏನಾಕ್ಕು. ನಾಳೆ ಜಾತ್ರೆಗೆ ಹೋದವ ನಾ ತಂದ್‌ಕೊಟ್ನೆ.

**ಗೌರು** : ಮೊನ್ನೆ ಜಾತ್ರೆ ಆಟಲಿ ನೀ ಕೃಷ್ಣನ ವೇಸ ಹಾಕಿದ್ದ್ ಗಡ – ಬಾರೀ ಪೊರ್ಲಾಗುಟ್ಟು ಗಡ – ಆಟ ನೋಡಿ ಮನೆಗೆ ಬಂದ ಗೂಡೆಗೆ ಅದೇ ಜಪ. ನಿನ್ನ ಕೃಷ್ಣಂದೇ ಗೇನ.

**ನಂಜ** : *(ಆತುರದಿಂದ)* ಹೌದತ್ತೆ ? ಎಲ್ಲಿ ಮೋಂಟಿ ಒಳಗುಟ್ಟೋ ?

**ಗೌರು** : ಎಲ್ಲ ಒಳಗೆ ಕೆಬಿ ಕೊಟ್ಟುಕಂಡಿರ್ದು – ಪಾಪ – ಹೋಗು ಒಳಗೆ ಅದರ ಸಮಾಧಾನ ಮಾಡ್.

**ನಂಜ** : *(ಒಳಹೋಗುತ್ತಾ ಅತ್ತಿತ್ತ ನೋಡಿ)* ಮಾವ ಬಾಕಿಲ್ಲೆಲೆ ಈಗ.

**ಗೌರು** : ಬಾಕಿಲ್ಲೆ. ಬಂದರೆ ನಾ ಒಳೆ – ಅಲ್ಲಿ ಗೂಡೆ ಕಾದದೆ. *(ನಂಜ ಒಳಹೋಗುವನು. ಗೌರು ಅರ್ಧ ಗುದ್ದಿಟ್ಟ ವೀಳ್ಯವನ್ನು ಮತ್ತೆ ಗುದ್ದಿ ಬಾಯಿಗಿಡುತ್ತ)* ಅಪ್ಪ ಬಾರದ್ದರೂ ತೊಂದ್ರೆ ಇಲ್ಲೆ. ಇನ್ನು ಈ ಮಂಜನ ಗಟ್ಟಿ ಮಾಡೊಕು. ನಂಗೂ ಸೊಂಟ ಬೇನೆಲಿ ನಡೀಕಾದುಲ್ಲೆ. *(ಹೊರಗೆ ಮತ್ತೆ ನಾಯಿ ಬೊಗಳುವುದನ್ನು ಕೇಳಿ, ನೋಡಿ)* ಯಾರದ್ ಕೋವಿ ಹಿಡ್ಕಂಡ್ *(ಬೆರಗು ಗಾಬರಿಯಿಂದ)* ಮಂಜನ ಬೆನ್ನಿಗೇ ಇವ್ರೂ ಬಂದೊ ! ಎಂತ ಮಾಡುದು ? *(ಬಾಗಿಲ ಬಳಿ ಬಂದು)* ಥೂ ಹಡ್ಬೆ – ಕಾಟ್ ನಾಯಿ ನಿನ್ನ ಕಣ್ಣ್ ಹೊಟ್ಟಿ ಹೋಗುಟ್ಟೊ ಹೇಂಗೆ. ಸುಟ್ಟದ್. ಯಾಗೊಳೂ ಬಾವವಕ್ಕೆ ನೋಡಿ ಬೊಗ್ಳುದು. ಈಗ ನಿಲ್ಸಿ ಬೀಲ ಆಡ್ಸಿದೆ. ಮಂಜಣೆ ಮಾಡ್‌ದೆ (ಮೆಟ್ಟಿಲು ಹತ್ತಿದ ನಾಗಪ್ಪನಲ್ಲಿ) ಬನ್ನಿ ಬನ್ನಿ – ನಿಮ್ಮ ಬಾರಿ ಮೂಸಿದೆ. ಏನೋ ತಂದಿರುಕೊಂತ (ಅವನ ಕೈಯಿಂದ ಕೋವಿ ತೆಗೆದುಕೊಂಡು ಗೋಡೆಯ ಮೂಲೆಗೊರಗಿಸಿ) ಏನ್ ಕಾಂಬಕೆ ಸಿಕ್ಕಿತ್‌ಲ್ಲೆಂತ ಕಂಡದೆ – ಗುಂಡೇ ಕೇಳ್ತ್‌ಲ್ಲೆ.

**ನಾಗಪ್ಪ** : *(ಬಟ್ಟೆಯಿಂದ ಬೆವರೊರೆಸಿ ಗಾಳಿ ಹಾಕಿಕೊಳ್ಳುತ್ತ)* ಧರ್ಮಕ್ಕೆ ಕಾದ್ ಕೂತದ್ದ್ – ಕಡೆಗೆ ಒಂದ್ ಪಾಂಜ ಕಂಡತ್. ಕಡವೆ ಈಡ್ ಅದಕ್ಕೆ ಯಾಕೆ ಖರ್ಚು ಮಾಡೂದಂತ ಬಾಕಿ ಮಾಡಿ ಬಂದೆ. ಇತ್ತ ಬಾರೆದೆನೂ ಬಾರಿ ದಿನಾತಲ್ಲ.

**ಗೌರು** : ಕುದ್ರಿ – ಕುಡೆಕೆ ತನ್ನೆ *(ಒಳಹೋಗುವಳು)*

**ನಾಗಪ್ಪ** : *(ಮೀಸೆಯನ್ನು ಬೆರಳಲ್ಲಿ ತೀಡುತ್ತ ಒಳಗೇನೋ ಸದ್ದಾಗುವುದನ್ನು ಗಮನಿಸಿ)* ಂದಾ ! ಗೌರು. ಬರೇ ನೀರ್ ಸಾಕ್‌ಯಾ ಅಟ್ಟಕ್ಕೆ ಹತ್ತಿ ಗಡಬಡ ಮಾಡ್ಬೇಡ.

**ಗೌರು** : *(ಒಳಗಿನಿಂದ ಬರುತ್ತ)* ಬರೇ ನೀರ್ ಹೇಂಗೆ ಕೊಡುದೂಂತ. ಮೊನ್ನೆ ಜಾತ್ರೆಂದ ಬಾಕನ

ತಂದ ಓಲೆಬೆಲ್ಲದ ಕಟ್ಟ್ ಅಟ್ಟಲಿಸಿದ್ದರ ನೋಡ್ದ್. ಅದರ ಅಪ್ಪ ಮಗಂತ ಎಲ್ಲ ಖಾಲಿ ಮಾಡ್ರ್ಯೊಳೊ. ಯಾರಾರ್ ನಿಮ್ಮಂತವು ಬಂದರೆ ಮರ್ಯಾದೆ ಹೋದೆ. ತಕಣಿ ಅರ್ಧ ಉಳ್ದುಟ್ಟು.

**ನಾಗಪ್ಪ** : *(ಬೆಲ್ಲ ತೆಗೆದುಕೊಂಡು ಕಚ್ಚಿ ನೀರು ಕುಡಿದು)* ಸೋಂಪಣ್ಣ ಗುತ್ತಿಗೆಗೆ ಹೋಗಿರೋಕು – ಗೂಡೆ ?

**ಗೌರು** : ಆಚೆಮನೆ ಪೂವಕ್ಕ ಬಂದಿತ್ತ್ – ಅದ್ ಸೋಬಾನೆ ಕಲ್ಸಿನೆಂತ ಕರ್ಕಂಡ್ ಹೋಗುಟ್ಟು. ಇವು ಬಾಕನ ರಾತ್ರೆ ನಡೀರ್ಲ್ಲಾವುದು. ಗೂಡೆ ಈಗ ಹೋದಷ್ಟೆ – ಇಂದ್ ಬಾಕಿಲ್ಲೆ.

**ನಾಗ** : ಹಾಂಗಾರೆ ತೊಂದರೆ ಇಲ್ಲೆ. ಆ ಹರಿವಾಣ ಇತ್ತ ತಂಬ. ನಾ ನಿಂಗೆ ಗುದ್ದಿ ಕೊಟ್ನೆ – ಹರಿವಾಣ ಇತ್ತ ಇಸ್. ನೀ ಕುದ್ದ್ ಸುಣ್ಣ ಹಾಕಿ ವೀಳ್ಯ ಮಡ್ಚಿ ಕೊಡ್.

**ಗೌರು** : *(ರಾಗದಿಂದ)* ಬೇಡ – ನೀವು ಗುದ್ದಿರೆ ನಂಗೆ ಸಾಕಾದುಲ್ಲೆ.

**ನಾಗ** : ಇಲ್ಲೆಯಾ – ಇಂದ್ ಸರಿ ಗುದ್ದಿನೆ – ಪ್ರಾಯ ಆದಾಂಗೆ ನಿಂಗೆ ಗುದ್ದುದು ಸಾಕಾದುಲ್ಲೆಂತ ಕಂಡದೆ.

**ಗೌರು** : ಸಾಕ್ ನಿಮ್ಮ ಬಡಿವಾರ – ದಿನಕಳ್ದಂಗೆ ನೀವು ಜವಣರಾಕ್ಕೊಂಡು ಬಂದೆರಿ. ಅ ಶಿವಮ್ಮಕ್ಕ ನಿವ್‌ಗೆ ಸಾಕಾದುಲ್ಲೆಂತ ಕಂಡದೆ.

**ನಾಗ** : ಸಾಕಾದರೆ ನಾ ಯಾಕೆ ಇಲ್ಲಿ ಬರೋಕೆಯಾ – ಮಾತ್ ಸಾಕ್ ತಡ ಮಾಡ್ಬೇಡ – ಕತ್ತಲಾಕೆ ಮುಂದೆ ಮನೆಗೆ ಹೋಕು.

**ಗೌರು** : ಹೊತ್ತಾದರೆ ಇತ್ತ ಬನ್ನಿ. ಆ ಕೋಣೆಲಿ ಚಾಪೆ ಹಾಸಿನೆ *(ಮುಂದಾಗುವಳು. ನಾಗಪ್ಪ ಅವಳನ್ನು ಹಿಂಬಾಲಿಸುವನು. ತುಸು ಹೊತ್ತಿನಲ್ಲಿ ಮತ್ತೆ ಹೊರಗಿನಿಂದ ನಾಯಿ ಬೊಗಳುತ್ತದೆ – ಜೋರಾಗಿ ಕರೆಯುವುದು ಕೇಳಿಸುತ್ತದೆ)* ಮೋಂಟಿ – ಏ ಮೋಂಟಿ. ಏನ್ಮಾಡ್ತ ಒಳರಿ ಒಳಗೆ – ನಿನ್ನ ಅಯ್ಯೆ ಇಲ್ಲೆನೆ ಮನೇಲಿ. ಇಲ್ಲಿ ನಡುಮನೆ ಎತ್ತುಗ ಬೇಲಿ ಹಾರಿ ನಟ್ಟಿ ಎಲ್ಲ ಲಗಾಡಿ ತೆಗ್ದೊ – ಮನೆಲಿ ಎಲ್ಲ ಮರಗಟ್ಟಿ ಹೋಗ್ಯೊಳೊರೊ ಹೇಂಗೆ *(ಎನ್ನುವ ಸೋಂಪನ ಸ್ವರ ಕೇಳಿ ಗಡಿಬಿಡಿಯಿಂದ ಒಬ್ಬಳೆ ಸೀರೆ ಸರಿಮಾಡಿಕೊಂಡು ಬರುತ್ತ)* ಬಂದೊಂತ ಕಂಡದೆ. ಇಂದ್ ಬೇಗ ಏನ್ – ಗುತ್ತಿಗೆಲಿ ಕುಡ್ದ್ ಜಗಳಾ ಮಾಡಿ ಬಂದವ್ರೊ ಹೇಂಗೆ – ಬಾರಿ ಸಿಟ್ಟೆಲೊಳೊ – ದನಿ ಮಾಡಿಕೊಂಡೇ ಬಂದವೆ.

**ನಾಗಪ್ಪ** : *(ಹೊರಬರುತ್ತ)* ಎಂತ ಮಾಡುದ್‌ಯಾ ಈಗ. ಸೋಂಪ ಬಂದೇ ಬುಡ್ತಲೆ.

**ಗೌರು** : ಬರಲಿ – ಹೆದರ್ಬೇಡಿ – ನಾ ಒಳೆ.

**ನಾಗಪ್ಪ** : ನಾ ಹಿಂಬಾಗ್ಲಿಂದ ಹೋನೆ.

**ಗೌರು** : ಬೇಡ. ಅವು ಆ ಕಡೇಂದಲೆ ಬಂದವೆ. ಒದನಿ ನೀವು ಈ ದೊಣ್ಣೆ ಹಿಡ್ಕನಿ – ಮತ್ತೆಲ್ಲ ನಾ ಮಾಡ್ನೆ – ಕೋಣೆಲೆ ಕುದ್ರಿ. ಹೊರಗೆಂದ ನಾ ಸಂಕಲೆ ಕೋಸಿನೆ *(ನಾಗಪ್ಪ ಮತ್ತೆ ಕೋಣೆಯೊಳಗೆ ಹೋಗುವನು)*

**ಸೋಂಪ** : *(ಜಗಲಿ ಹತ್ತುತ್ತ)* ಯಾರದ್ ಒಳಗೆ..? ಮೆಟ್ಲ್‌ಲಿ ಯಾರದ್ ಈ ಜೋಡು ?

**ಗೌರು** : ಒಬ್ಬರಲ್ಲ ಇಬ್ಬರೊಳೊ. ಅಪ್ಪ ಮಂಜ. ಈ ಅಪ್ಪ ಮಂಜ ಜಗಳ ಮಾಡಿಕಂಡ್ ಪೆಟ್ಟಿಗೆ

ಇಲ್ಲಿಗೆ ಬರೋಕೊ. ಯಾಕೆ ಏನ್ಂತ ಕೇಳಿಕೆ ಪುರ್ರೊತ್ತಿಲ್ಲೆ – ನೋಡ್ಕನ ನಡುಮನೆ ಅಣ್ಣ ಮಂಜನ ಹೊಡೆಕೆಂತ ದೊಣ್ಣೆ ಹಿಡ್ದ್ ಬೆರ್ಸಿಕಂಡ್ ಬಂದವೆ. ಪಾಪ ! ಹೈದ ಹೆದ್ರಿ ಓಡಿಕಂಡು ಬಂದ್ ಬಂದ್ ನಮ್ಮ ಮನೆ ನುಗ್ಗ್. ಅಣ್ಣ ಬೆನ್ನಿಗೇ ಬಂದ್ ಮೆಟ್ಲ್ ಹತ್ತ್‌ಕನ ಪುಣ್ಯಕ್ಕೆ ಹೈದ ಒಳಮನೆಗೆ ಹೋಗಿ ಒಳಗಂದ ಬಾಗ್ಲ್ ಮುಚ್ಚಿ ಚಿಲಕ ಹಾಕಿಕಂಡತ್. ಅಣ್ಣ ಸಿಟ್ಟ್‌ಲಿ ಮಂಜನ ಹುಡ್ಕಿ ಆ ಕೋಣೆಗೆ ಹೋಕನ ನಾ ಪಡಿ ಎಳ್ದ್ ಹೊರಗೆಂದ ಸಂಕಲೆ ಕೋಸ್ನೊಳೆ. ನೋಡಿ ಇಬ್ಬರ್ ಒಳಗೊಳೊ.

**ಸೋಂಪ** : ಹೌದೊ. ಶಹಬಾಸ್ – ಹೆಣ್ಣ್ಂತೇಳ್ರೆ ನೀ – ಒಳ್ಳೆ ಕೆಲ್ಸ ಮಾಡ್ದ – ಮಾಡಿರೆ ಹೀಂಗೆ ಮಾಡೋಕು.

**ಗೌರು** : ನಾಗಪ್ಪಣ್ಣಂಗೆ ಈಸ್ ಕೋಪವುಟ್ಟುಂತ ನಾ ಇಂದೇ ನೋಡ್ದ್. ಯಾ ಕೋಪ! ಸಿಟ್ಟ್‌ಲಿ ನಡ್ಗಿವೆ. ಹೈದ ಪಾಪ ಹೆದ್ರಿ ನಡ್ಗಿದೆ. ಮಂಜನ ಹೊಡೆಕೆ ಅವು ಇಲ್ಲಿ ಬರೋಕೊ ? ಇಲ್ಲಿ ಹೊಡ್ದ್ ಏನಾರ್ ಆದರೆ ಕೋರ್ಟಿಗೆ ನಾವು ಹೋಕು ಮತ್ತೆ.

**ಮೋಂಟ** : ಅಲ್ಲ ಮತ್ತೆ – ನಾಗಪ್ಪಂಗೆ ಅಷ್ಟ್ ಗೊತ್ತಾದುಲ್ಲೆ. ಎಲ್ಯೊಳೊ ಈಗ ?

**ಗೌರು** : ಈ ಕೋಣೆಲಿ. ಈಗ ಸಿಟ್ಟ್ ಇಳ್ದುಟುಂತ ಕಂಡದೆ – ಸುದ್ದಿಯಿಲ್ಲೆ. ಆಜ ಹಾಕ್ಸಿ ಸಂಕಲೆ ತೆಗ್ದನೆ *(ಕೋಣೆ ಬಾಗಿಲ ಬಳಿ ಹೋಗಿ)* ಒದೆನಿ ಅಣ್ಣ !ನೀವು ನಿಮ್ಮ ಮಂಜನ ಇಲ್ಲಿ ಹೊಡ್ಯಕೆ ಬತ್ತ್. ಆವುದೊ – ಸರಿ – ಸಿಟ್ಟ್ ಇಳ್ತೊ, ಸಿಟ್ಟ್ ಇಳ್ತೊ ಬನ್ನಿ.

**ಸೋಂಪ** : ನಾಗಪ್ಪಣ್ಣನಲ್ಲಯ – ನಂಜ ಹೈದನ ಮುಂದೆ ಕಳ್ಸುಮೊ.

**ಗೌರು** : ಆವುದು. *(ಒಳಮನೆ ಬಾಗಿಲ ಬಳಿ ನಿಂತು)* ಒದಾ ಮಂಜ. ರಾತ್ರೆ ಮಾಡಿ ಮನೆಗೆ ಬಾವ ನಿನ್ನ ಮಾವ ಇಂದ್ ಬೇಗ ಬಂದದರ್ಂದ ಬಚಾವಾತ್. ಇನ್ನ್ ಹೆದ್ರಿಕಿಲ್ಲೆ. ನಿನ್ನಪ್ಪ ಕೋಣೆಲೊಳೊ. ಸಂಕಲೆ ಕೋಸ್ನೊಳೆ. ಅವರ ಸಿಟ್ಟ್ ಇಳ್ದುಟ್ಟು. ಬಾ ಮಂಜ ಚಿಲಕ ತೆಗ್ದ್. ಎಂತ ? ಅಟ್ಟೊಳ್ಳೊಳ ? ಅಟ್ಟಂದ ಮೆಲ್ಲ ಕೇರ್ಪುಲಿ ಇಳಿ. *(ಸ್ವಲ್ಪ ಹೊತ್ತಿನಲ್ಲಿ ನಂಜ ಬೆವರಿಳಿಸುತ್ತ ಹೊರಬರುವನು)* ನೋಡಿ ಹೈದ ಹೆದ್ರಿ ಎಸ್ಟ್ ಬೆವರಿಟ್ಟುಂತ. ಇಲ್ಲೆ ಮಂಜ ಇನ್ನ್ ಹೆದರ್ಬೇಡ. ನಿನ್ನ ಅಪ್ಪಂಗೆ ಮುಕ್ಕಾಲು ಮೂರೇ ಗಳಿಗೆ ಕೋಪ. ಅದ್ ಇಳ್ದುಟ್ಟು. ಇಲ್ಲಿ ಅಪ್ಪನ ಎದ್ರ್ ನಿಲ್ಬೇಡ. ಸೀದಾ ಮನೆಗೆ ಹೋಗ್. ಅಪ್ಪನ ಮತ್ತೆ ಕಳ್ಸಿವೆ *(ಹೋಗುವವನಲ್ಲಿ)* ಮಕ್ಕ ಅಪ್ಪನ ಎದ್ರ್ ನಿಲ್ಲಿಕಾಗದ್. ಅವು ಹೇಳ್ದ ದಾರಿಲೇ ನಡಿಯೋಕು. *(ಗಂಡನಲ್ಲಿ)* ಮಂಜ ಹೋತಲೆ ಇನ್ನ್ ಅಪ್ಪನ ಕಳ್ಸುಮೊ. ಅಣ್ಣನ ನೀವೇ ಕರಿಯಿನಿ. ಸಿಟ್ಟ್ ಇಳ್ದುಟ್ಟೊ ನೋಡಿ.

**ಸೋಂಪ** : ಬನ್ನಿ ಅಣ್ಣ ಹೊರಗೆ. ಆದದ್ ಆಗಿ ಹೋತ್. ಪುಣ್ಯಕ್ಕೆ ಇಲ್ಲಿ ಬಂದದ್ದರ್ಂದ ಇಷ್ಟಕ್ಕೆ ಮುಗ್ತ್. ಕೋಪಲಿ ಮನ್ಸ ಏನ್ ಮಾಡ್ದೆಂತ ಅವಂಗೆ ಗೊತ್ತಾದುಲ್ಲೆ.

**ಗೌರು** : *(ತಲೆ ಅಡಿಗೆ ಹಾಕಿ ನಾಗಪ್ಪ ಹೊರ ಬರುವಾಗ)* ಹೋಗಲಿ. ಅವರ ಹೆಚ್ಚ್ ಮಾತಾಡಿಸ್ಬೇಡಿ – ಸ್ವಲ್ಪ ಕುದ್ರಿ ಅಣ್ಣ – ಹೈದಕ್ಕಳ ಓಡಿಸಿರೆ ಪ್ರಾಯಸ್ಥರಿಗೇ ಹೆಚ್ಚು ಬಚ್ಚುದಲ್ಲೋ. ಸೇಂಕುತ್ತೊಳರಿ. ನೀರ್ ತನ್ನೆ. ಕುಡ್ದರೆ ಬಚ್ಚೆಲ್ ಕೋಪ ಇಳ್‌ದದೆ.

**ಸೋಂಪ** : ಮನೆಗೆ ಹೋಗಿ ಮತ್ತೆ ಮಂಜಂಗೆ.

**ಗೌರು** : ಮಂಜಂಗೆ ಹೊಡಿದುಲ್ಲೆಂತ ಮಾತ್ ಕೊಡಿ – ನಮ್ಮ ಕಲ್ಲುರ್ಟೆ ಆಜ ಹಾಕಿ. ನಿಮ್ಮ ಈ ಸಿಟ್ಟ್ ಇಂದೇ ಬುಡೊಕು.

**ನಾಗಪ್ಪ** : ಆತಪ್ಪ. ಸಿಟ್ಟ್‌ಲಿ ಹೀಂಗಾತ್. ಇನ್ನ್ ಇಂತ ಸಿಟ್ಟ್ ಬುಟ್ನೆ – ನಂಜ ನನ್ನ ಮಂಜ ಅಲ್ಲೊ. ಅವನ ಬಡಿಕಿಲ್ಲೆ. ಬನ್ನೆ.

**ಸೋಂಪ** : ಆತ್. ಈ ಬೇಗ ಕತ್ತಲಾದೆ.

**ಗೌರು** : ಮತ್ತೆ ದಾರಿ ಕಾಂಬಕ್ಕಿಲ್ಲೆ. ಅಲ್ಲಿ ತಡಮ್ಮೆ ದಾಟ್ಕನ ಜಾಗ್ರತೆ *(ನಾಗಪ್ಪ ಹೋದ ಬಳಿಕ ಗಂಡನಲ್ಲಿ)* ನಮ್ಮ ಗೂಡೆ ಇನ್ನ್ೕ ಏನ್ ಮಾಡ್‌ದೆ ಮೂವಕ್ಕನಲ್ಲಿ. ಸೋಬಾನೆ ಕಲೀಕೆ ಹೋಗುಟ್ಟು. ಹೋಗಿ ಒಮ್ಮೆ ಕರ್ಕಂಬನ್ನಿ – ಕತ್ತಲಾದರೆ.

**ಸೋಂಪ** : ಪಾಪ – ಕತ್ತಲಾದರೆ ಹೆದ್ರಿಕಂಬೊದು. ಹೋಗಿ ಬನ್ನೆ *(ಹೋಗುವವನು)*

**ಗೌರು** : *(ಒಳಗಿರುವ ಮಗಳಿಗೆ)* ಬಾನೆ ಇಲ್ಲಿ. ಎಂತ ಮಾಡ್ತಾ ಒಳ ಒಳಗೆ. *(ಹೋಗುತ್ತಿರುವ ಗಂಡನನ್ನು ಕರೆಯುತ್ತ)* ಒದನೀ ಗೂಡೆ ಬಾತ್. ಈ ಕಡೇಂದ ಬಾತ್. ನೀವ್ ಆ ಕಡೇಂದ ಅಲ್ಲಿಗೆ ಹೋಕೂಂತಿಲ್ಲೆ. ಬನ್ನಿ ಬನ್ನಿ – ಆ ಚಿಮ್ಣಿ ಎಲ್ಯುಟ್ಟು. ದೀಪ ಉರ್ಸಿಕೆ ನಾನೇ ಬರೊಕುಂತ ಕಂಡದೆ. *(ಒಳಹೋಗುವಳು – ಕತ್ತಲು ಆವರಿಸುವುದು)*

## ಬೊಳ್ಪಾಕನ ಮುಗ್ತ್

7

*(ಬಯಲುದಾರಿ – ಕಂಕುಳಲ್ಲಿ ಚೀಲವೊಂದನ್ನು ತೂಗಿಸಿಕೊಂಡು ಸೋಂಪನ ಪ್ರವೇಶ)*

**ಸೋಂಪ** : ಮೊದ್ವೆ ಒಂದು ನಿಗಂಟ್ ಆಗುಟ್ಟು. ಹೇಂಗೆ ಮುಗ್ದದೆಯೋ ಆ ದೇವರಿಗೇ ಗೊತ್ತು. ಗುರು ಕಾರ್ನೂರ್ ಕೈ ಬುಡಿಕಿಲ್ಲೆ ನೋಡೊಮೊ. ದುಡ್ಡಿಗೆ ನಾಗಪ್ಪಣ್ಣನಲ್ಲಿ ಕೇಳ್ಯೊಳೆ. ಕೊಟ್ಟೆನಂತ ಹೇಳ್ಯೊಳೊ. ಚಕ್ರಬಡ್ಡಿ ಕೊಟ್ಟೆನೆಂತ ಹೇಳ್ಯೊಳೆ. ಕೊಡದಿರಿಕಿಲ್ಲೆ. *(ತುಸು ಹೆಜ್ಜೆ ಹಾಕಿ)* ಜವುಳಿಗೆಲ್ಲ ಕ್ರಯ ಕಡಿಮೆ ಕಡಿಮೆಂತ ಹೇಳಿವೆ. ಏನ್ ಕಡಿಮೆಯೊ ಒಂದನ್ನೂರ್ ಮುಟ್ಟಿಕೆ ಬತ್ತ್. ಹೆಂಗೂ ಬಟ್ಟೆ ಎಲ್ಲಾ ತೆಗ್ದಾದಪ್ಪ – ಹೊಲಿಯಕೆ ಹಾಕ್ಯುಟ್ಟು. ಸಮಯಕ್ಕೆ ಸರಿಯಾಗಿ ಹೊಲ್ದ್ ಕೊಟ್ಟವೆಯೊ ನೋಡೊಕು. ಈ ಮೂರ್ತಲಿ ಊರಿಲಿ ಎರಡ್ಮೂರು ಮೊದ್ವೆ ಉಟ್ಟು. ದರ್ಜಿಗಳಿಗೆ ಹಗಲ್ ಇರ್ಲ್ ಪುರುಸೊತ್ತಿಲ್ಲೆ. ಹೋಗಿ ಕೇಳ್ಕನ ಹೇಳ್ವೆ. ಈಗ ಕೊಟ್ನೆ ಕಾಗಡೆ ಅಂಗ್ಡಿಗೆ ಹೋಗಿ ಬನ್ನಿಂತ. ಒಟ್ಟೆ ಹೊಲಿತ ಒಳೆ. ಗುಬ್ಬಿ ಹಾಕಿಕೆ ಉಟ್ಟುಂತ. ಏನ್ ಒಟ್ಟೆ ಹೊಲ್ದವನೊ! ಮೊನ್ನೆ ಗೋಳಿಕಟ್ಟೆ ಲಿಂಗಣ್ಣನ ಮದುವೆ ಮನೇಲಿ ಗೂಡೆಗೆ ಬಣ್ಣ ಬಂಗಾರ್ ಇಸಿಕನ ಮೊದುಮಗಳ ರವಿಕೊಟ್ಟೊ ? ಮತ್ತೆ ಹೋಗಿ ತಂದದ್. ತಂದ್ ನೋಡ್ಕನ ಅದಕ್ಕೆ ಒಟ್ಟೆ ಉಟ್ಟೊ? ಗುಬ್ಬಿ ಹೊಲ್ದುಟ್ಟು ಒಟ್ಟೆ ಇಲ್ಲದಿರ್ಕನ ಮತ್ತೆ ಪಿನ್ ಕುತ್ತಿ ಹೇಂಗೊ ಹೆಮ್ಮಕ್ಕ ಸುಧಾರಿಸಿಕೊಂಡೊ ಹೇಳಿ. ಒಟ್ಟಾರೆ ಹಿಡ್ದ ಮೊದ್ವೆ ಒಂದ್ ಪೊರ್ಲುಲಿ ಸುಧಾರಣೆ ಆದರೆ ಸಾಕ್.

**ರಾಂಪ** : *(ಇದಿರಿನಿಂದ ಬರುತ್ತ ನೋಡಿ)* ಎನಿಯಾ ಸೋಂಪ. ಸುಧಾರಣೆ ಸುಧಾರಣೆ ಅಂತ ಹೇಳ್ತಾ ಬಂದಿಗ ? ಯಾರೊಟ್ಟಿಗೆ ಹೇಳ್ತಾ ಒಳೆಯ ?

**ಸೋಂಪ** : ಯಾರೊಟ್ಟಿಗೆ ಹೇಳ್ದು ಬಾವ ! ನನ್ನಲ್ಲೇ ನಾ ಹೇಳಿಕಾಂಕಷ್ಟೆ. ಈ ಒಂದ್ ಮೊದ್ವೆ ಸುಧಾರಣೆ ಆದರೆ ಸಾಕ್.

**ರಾಂಪ** : ಯಾರದ್‌ಯಾ ? ನಿನ್ನ ಗೂಡೆದ್ದ್ !

**ಸೋಂಪ** : ಹೋದ್ ಬಾವ ಹೇಂಗಾರ್ ಹೈದ ನಿಗಂಟಾಗುಟ್ಟು

**ರಾಂಪ** : ಯಾರ್‌ಯಾ ಹೈದ

**ಸೋಂಪ** : ದೂರದವಲ್ಲ. ನಮ್ಮ ಜೋಗಿಬೆಟ್ಟ್ ಜೋಯಿಸರ್ ಹೇಳ್ದವಲೆ. ಹಾಂಗೇ ಆತ್. ಹೈದ ಹಕ್ಕಲೆನೇ ಇತ್ತ್. ಅವು ಉರ್ಕು ಬರ್ದ್ ಕೊಟ್ಟ್ ತಿಂಗಾತ್‌ಲ್ಲೆ. ದೂರದವಂಲ್ಲ ನಮ್ಮ ಮೋಂಟ ಹೈದನೆ.

**ರಾಂಪ** : ಆಗಲಿ ಅಂವ ಒಪ್ಪಿಟ್ರೊ ? ಅವ ಒಪ್ಪಿರೂ ನಿನ್ನ ಗೂಡೆ – ಗೂಡೆನಯ್ಯೆ.

**ಸೋಂಪ** : ಎಲ್ಲರ ಒಪ್ಪಾಯ್ಗುಟ್ಟು. ಮೊದ್ವೆ ಬಾವ ಐತಾರಂತ ನಿಗಂಟ್ ಆಗುಟ್ಟು.

**ರಾಂಪ** : ಮೋಂಟನ ಆ ಬಟ್ರ್ ಅವು ಮನೇಂದ ಬುಡೊಕಲೆ.

**ಸೋಂಪ** : ಅಂವ ಅಲ್ಲಿಂದ ಬುಟ್ಟುಟ್ಟು ಬಾವ. ಮೋಂಟ ಈ ನಾಗಪ್ಪಣ್ಣನಲ್ಲಿಟ್ಟು. ಅವರದ್ದೆ ಸಂಧಾನ – ಮನೆ ಅಳಿಯ ಆಗಿ. ಅವಂಗೂ ಯಾರೂ ಇಲ್ಲೆನೆ. ನವ್‌ಗೂ ಮೋಂಟ ಒಬ್ಬ ಮಂಜನ ಹಾಂಗೆ ಆದೆ.

**ರಾಂಪ** : ಒಳ್ಳೇದಾತ್‌ಯಾ. ಮೋಂಟನ ಮೂಗುದಾರ ಹಾಕದೆ ಎಲ್ಲಿಗೂ ಕೊಂಡುಹೋಕ್. ನಿನ್ನ ದೆಸೆ ಬದಲಾತ್. ಆಗಲಿ.

**ಸೋಂಪ** : ಆಗಲಿ ಅಂದರೆ ಸಾಲದ್ ಬಾವ. ಮೊದ್ವೆ ಒಂದು ಸುಧಾರ್ಸಿ ಕೊಡೊಕು.

**ರಾಂಪ** : ಅದರ ಸುದ್ದಿ ಬುಡ್‌ಯಾ. ನನ್ನಂದ ಏನಾಕ್ಕು ಹೇಳ್ ? ದುಡ್ಡು ಒಂದು ಬಗೆ ಬುಟ್ಟು. ನಾ ಬಾರಿ ಚೋಪಾರಿಲಿ ಒಳೆ.

**ಸೋಂಪ** : ಬೇಡ ಬಾವ. ಅದೆಲ್ಲ ನಾಗಪ್ಪಣ್ಣನೊಟ್ಟಿಗೆ ಕೇಳಿ ಆಗುಟ್ಟು. ಎಲ್ಲಾ ಅವು ಸುಧಾರಣೆ ಮಾಡ್ವೆ. ಆದರೂ ಬಾಕಿ ಉಟ್ಟಲೆ.

**ರಾಂಪ** : ಮತ್ತೆ ಅಡುಗೆ ಚಪ್ಪರ ದಿಬ್ಬಣಂತ ಊರವು ಇರ್ಕನ ನೀ ಯಾಕೆ ಬೆಚ್ಚ ಮಾಡ್‌ಯಾ ! ನಮ್ಮ ಆಟದ ಮೇಳದವು ಒಳೊ. ನೀ ಅವಕ್ಕೆ ಮೊದ್ವೆ ಹೇಳ್ಕೆ ಕೊಟ್ರೆ ಅವು ಎಲ್ಲಾ ಬಂದ್ ಸುಧಾರ್‌ಸ್ವೆ.

**ಸೋಂಪ** : ಅದರ ಇಂದೇ ನಾ ಸುರುಮಾಡ್ಯೊಳೆ.

**ರಾಂಪ** : ಎಲ್ಲಿ ಮೊದ್ವೆ ಕಾಗದ ಮಾಡ್ಸೊಳೊ ನೋಡುಮೊ

**ಸೋಂಪ** : ಇಲ್ಲೆ ಬಾವ. ಕಾಗದ ಪ್ರಿಂಟ್ ಮಾಡ್ಸಿಕೆ ನೆನ್ನೆ ಸುಳ್ಯಕ್ಕೆ ಹೋಗಿ ಕೇಳ್ಕನ ಹೇಳ್ದೊ – ಪುರುಸೊತ್ತಿಲ್ಲೆ – ಮೊದ್ವೆ ಮರ್ದಿನ ಮಾಡಿಕೊಟ್ಟವೆಂತ. ಹಾಂಗೆ ಕಾಗ್ದದ ಬದ್ಲ್ ಎಲೆ ಅಡಿಕೆ ಹಿಡ್ಕಂಡ್ ಹೊರಟದ್.

**ರಾಂಪ** : ಅದೇ ಒಳ್ಳೆದ್‌ಯಾ. ಅದ್ ನಮ್ಮ ಸಂಪ್ರದಾಯ. ಹಿಂದೆ ಕಾಗದ ಇತ್ತ್ವೊ. ಕಳ್ದ ವರ್ಸ ಮೂಲೆಮನೇವು ಕಾಗದ ಮಾಡ್ಸಿದ ಕತೆ ಗೊತ್ತುಟಲೆ.

**ಸೋಂಪ** : ಏನಾತ್ ?

**ರಾಂಪ** : ಮಂಜನ ಬದ್ಲ್ ಅಪ್ಪಂಗೇ ಮೊದ್ವೆ – ಸುಳ್ಯಲಿ ಆಕಿಲೆಂತ ಬೊಳ್ಳಿಗೆ ಪುತ್ತೂರಿಗೆ ಹೋಗಿ ಹಿಂಬೊತ್ತಿಗೆ ಮಾಡಿ ಕೊಡೊಕುಂತ ದುಡ್ಡು ಕೊಟ್ಟ್ ಬಂದೊ. ಒಂದ್ ಸಾವಿರ ಕಾಗದ ಅವು

ಹಿಂಬೊತ್ತಿಗೆ ಪ್ರಿಂಟ್ ಮಾಡಿ ಕಳ್ಸಿದೊ. ಇಲ್ಲಿ ಓದಿ ನೋಡ್ಕನ ಎಂತದ್ ! ಮೂಲೆಮಜ್ಲ್ ಕಿಟ್ಟಣ್ಣನ ಮಂಜ ಪುಟ್ಟಣನ ಇರೋಕಾದ್ ಪುಟ್ಟಣ್ಣನ ಮಂಜ ಕಿಟ್ಟಣ್ಣನಿಗೆ ಅಂತ ಆಗುಟ್ಟು –

**ಸೋಂಪ** : ಮತ್ತೆ ಎಂತ ಮಾಡ್‌ದೊ ?

**ರಾಂಪ** : ಕಾಗ್ದ ಒಲೆಗೆ ಹಾಕಿ ವೀಳ್ಯಅಡಕೆಲಿ ಹೇಳಿಕೆ ಕೊಟ್ಟ್ ಮೊದ್ವೆ ಮುಗ್ಸಿದೊ *(ದೂರದಿಂದ ಯಕ್ಷಗಾನ ಪದ ಕೇಳಿ ಬರುವುದು)*

**ಸೋಂಪ** : ಯಾರಿದ್ ! ನಮ್ಮ ನಂಜ ಬಂದದೆಂತ ಕಂಡದೆ – ಅವನ ಪದ ಒಸಿ ಕಡಿಮೆಯಿತ್ತ್ ಮತ್ತೆ ಸುರುವಾಗುಟ್ಟೊ.

**ರಾಂಪ** : (ಆಲಿಸಿ ಅತ್ತ ನೋಡುತ್ತ) ಅದ್ ನಂಜನ ಸೊರ ಅಲ್ಲಯ. ಅವನ ಗುರು ಮಂಜಂದ್. ಇತ್ತಳೇ ಬಂದದೆ ನೋಡ್. ಗತ್ತ್‌ಲಿ.

**ಮಂಜ** : *(ಪ್ರವೇಶಿಸುತ್ತ)* **ಬಂದನಾಗ ರಥದಲಿ ಬಂದನಾಗ** – ಯಾರಿದ್ ಸೋಂಪ ರಾಂಪಂದಿರ್ **ಯಾವಲ್ಲಿಂದ ಬಂದಿರಯ್ಯ ಜಾಣ ಬಾಲಕರಿರ । ಯಾವಲ್ಲಿಗೆ ಪಯಣವಯ್ಯ ಜಾಣ ಬಾಲಕರಿರ.** ಬಾರಿ ಮಾತಾಡ್ತಾ ಒಳೊರಿ ಏನ್ ಮಾತ್ – ಏನ್ ಮಾತ್ ?

**ಸೋಂಪ** : ಒಂದ್ ಮೊದ್ವೆ ಜಂಬರ ತೆಗ್ದಾಗುಟ್ಟು ಮಂಜಣ್ಣ. ನಿಮ್ಮ ಮನೆಗೇ ಹೊರಟಿದ್ದ್. ಅಪ್ಪ ಮನೇಲಿ ಒಳೊನೊ ?

**ಮಂಜ** : ಇಲ್ಲೆ ಇಲ್ಲೆ ಕೊಂರ್ಬಡ್ಕಕ್ಕೆ ಪಂಚಾತಿಕೆಗೆ ಹೋಗೊಳೊ.

**ರಾಂಪ** : ಹಾಂಗರೆ ನಿಂಗೆ ಇಲ್ಲೆ ಹೇಳಿಕೆ ಆಗಲಿ (ತಡೆದು) ಬೇಡ ಬೇಡ ದಾರಿಲಿ ಬೇಡ. ಅವಂದ್ ಊರು ಗೌಡ್ರ ಮನೆ ಅಲ್ಲೋ. ನೀ ಅಲ್ಲೇ ಹೋಗಿ ಹೇಳಿಕೆ ಕೊಡೊಕು.

**ಸೋಂಪ** : ಆವುದಣ್ಣ – ಮಂಜಣ್ಣ ! ಬಾವ ಐತಾರ ಮೊದ್ವೆ. ನಮ್ಮ ಗೂಡೆನ ಮೋಂಟಂಗೆ ದಾರೆ ಎರ್ದ್ ಬೂತಕ್ಕೆ ಕೊಡುದುಂತಲೂ ಮಾಡ್ಯೊಳೊ. ನಾಳೆ ಮನೆಗೆ ಬಂದ್ ಹೇಳಿಕೆ ಮಾಡ್ನೆ.

**ಮಂಜ** : ಏನ್? ಗೂಡೆನ ದಾರೆ ಎರ್ದ್ ಬೂತಕ್ಕೆ ಕೊಡ್ದು ! **ಎಲವೊ ಸೂತನ ಮಗನೇ । ನೀ ಕಲಹದೊಳತಿ ಸಹಸಿಗನೆ ।** ಎಂತ ಹೇಳ್ದುಯಾ ನೀ. ಆಗದ್ ಆಗದ್. ದಾರೆ ಎರ್ದ್ ಬೂತಕ್ಕೆ ಕೊಡೊ ಬದ್ಲ್ ಮೊದ್ವೆ ಚಪ್ಪರಲಿ ಒಂದ್ ಪಂಚವಟಿ ಪ್ರಸಂಗ ಆಗಲಿ. ನಿನ್ನ ಕಲ್ಲುರ್ಟಿಗೆ ಮತ್ತೆ ಕೊಡ್.

**ರಾಂಪ** : ಮಂಜ ಹೇಳ್ದ್ ಸರಿಯ. ಮೊದ್ವೆ ಚಪ್ಪರಲಿ ತಾಳಮದ್ದಲೆ ಆಗಲಿ. ಮೇಳದವೆಲ್ಲ ಬಂದವೆ. ಮೊದ್ವೆನ ಸುಧಾರಣೆ ಮಾಡ್‌ವೆ.

**ಮಂಜ** : ತಿಮ್ಮಪ್ಪ ಮಾಸ್ಟ್ರ ಭಾಗವತಿಕೆಗೆ ಬರೋಕು. ನೀ ಒಂದ್ ಕೆಲ್ಸ ಮಾಡ್. ಇಂದ್ ರಾತ್ರೆ ಸಾಲೆಲಿ ತಾಳಮದ್ಲೆ ಉಟ್ಟು. ಅಲ್ಲಿಗೆ ಬಂದ್ ಅಲ್ಲಿ ಮೇಳದವಕ್ಕೆ ಹರಿವಾಣಲಿ ಅಡಿಕೆವೀಳ್ಯ ಇಸಿದ್ ಹೇಳಿಕೆ ಮಾಡ್ –ಅವು ಬಂದ್ ಎಲ್ಲಾ ಸುದಾರ್ಸಿ ಕೊಟ್ಟವೆ.

**ಸೋಂಪ** : ಆವುದಣ್ಣ ರಾತ್ರಿ ಸಾಲೆಗೇ ಬನ್ನೆ *(ರಾಂಪನಲ್ಲಿ)* ರಾಂಪ ಬಾವ ಪೋಯಿ ! ಗುತ್ತಿಗೆ ಹಕ್ಕಲೆ ನಾನೂ ಬನ್ನೆ ಪೋಯಿ *(ಇಬ್ಬರೂ ಹೋಗುವರು)*

**ಮಂಜ** : *(ದೂರದಿಂದ ಕೇಳಿಬರುತ್ತಿರುವ)* **ಎತ್ತಪೋದಳೋ ಏನೇನಾದಳೋ । ಮಂದಗಾಮಿನಿ**

**ಮಧುರಭಾಷಿನಿ ।** *(ಪದ ಆಲಿಸಿ)* ಹ್ಲಾಂ, ನಂಜನೋ ಯಾರ ಹುಡುಕ್ತಾ ಒಳ? *(ಗಟ್ಟಿಯಾಗಿ)* ನಂಜಾ **'ಮಾರೀಚಂ ಪೋಂಮೃಗವಾಗಿ'** ಬಾ. ನಾ ಇಲ್ಯೊಳೆ.

**ನಂಜ :** *(ಪ್ರವೇಶಿಸುತ್ತ)* ಬಚಾವು – ನಿನ್ನ ಹುಡ್ಕಿ ಹುಡ್ಕಿ ಸಾಕಾತ್.

**ಮಂಜ :** ಯಾಕೆಯಾ – ನಿನ್ನಪ್ಪನ ಸಮಾಧಾನ ಮಾಡಿಕೆ ಬರೊಕೊ ಹೇಂಗೆ? ಮೊನ್ನೆ ಬಾರಿ ಪಿಸ್‌ರಿಲಿ ನಿನ್ನ ಹೊಡೆಕೆ ಬೆರಿಸ್ಯೊಳೊ ಗಡ.

**ನಂಜ :** ಅದಕ್ಕಲ್ಲೆಯಾ. ಅಪ್ಪನ ಪಿಸ್‌ರಿಳ್ದುಟ್ಟು – ಈಗ ಅಯ್ಯೆನ ಪಿರಿಪಿರಿ ಜೋರಾಗುಟ್ಟು.

**ಮಂಜ :** ಏನ್‌ಯಾ ಪಿರಿಪಿರಿ **ಅಳುವುದ್ಯಾತಕೆ ನೀ ತಾರೆ** ನಾ ಒಳೆ ಹೇಳ್.

**ನಂಜ :** ನನ್ನ ಮೊದ್ವೆ ಆಕೆ ಒತ್ತಾಯ ಮಾಡ್ತಾ ಉಟ್ಟು.

**ಮಂಜ :** ಆಗ್‌ಯಾ ಮೊದ್ವೆ. **ಆಯಿತು। ಸೇತುಕಟ್ಟಿ। ರಾಜೇಂದ್ರ.** ನಿನ್ನ ಅಯ್ಯೆಗೆ ಒಂದ್ ಸೊಸೆ ಬರಲಿ.

**ನಂಜ :** ಮೊದ್ವೆಗೆ ನಾ ಒಂದು ಶರ್ತ ಹಾಕೊಳೆ.

**ಮಂಜ :** ಏನ್‌ಂತ ?

**ನಂಜ :** ತಂಗೆನ ಮೊದ್ವೆ ಆಗಿ ನಾ ಆವುದುಂತ.

**ಮಂಜ : ಭಳಿರೆ ಮೆಚ್ಚಿದೆ ಕೇಳು** – ಅದ್ ಸರಿ – ಮುಂದೆ ನಿನ್ನ ತಂಗೆಗೊಂದ್ ಗಂಡ್ ಹುಡ್ಕ್.

**ನಂಜ :** ಬೇರೆ ಯಾಕೆ ಹುಡ್ಕೊಕಿಯಾ ನನ್ನ ಗುರು ನೀ ಇರ್ಕನ.

**ಮಂಜ :** ನಾ? **ಅಹಹ ಫಲುಗುಣ ಕೇಳು ನಿನ್ನಯ.** ನಂಜಾ ನನ್ನದೂ ಒಂದು ಶರ್ತ ಉಟ್ಟು – ನನ್ನ ತಂಗೆ ಮೊದ್ವೆ ಆಗಿಯೇ ನನ್ನ ಮೊದ್ವೆ. ಅದಿಕ್ಕೆ ಒಂದು ಗಂಡ್ ಆಕೊಲೆ. ಹೇಳ್.

**ನಂಜ :** ಅದಿಕ್ಕೆ ನಾ ಒಳೆಯ. ಬೇರೆ ಬಾವನ ಯಾಕೆ ಹುಡ್‌ಕಿಯ ?

**ಮಂಜ :** ಭಲಭಳಿರೆ. ನಿನ್ನ ತಂಗೆಗೆ ನಾ – ನನ್ನ ತಂಗೆ ನೀ ಇರ್ಕನ ಅಪ್ಪಂದಿರ್ ಗಂಡ್ ಹುಡ್ಕಿಕೆ ಯಾಕೆ ಹೊರಡೊಕು. **ತಾತನೆ ನೀ ಕೇಳ್ ಯಾತಕೆ ಪೊರಡುವೆ ?** ಅವ್ವ ಒಪ್ಪಿರೆ ನಮ್ಮ ಮೊದ್ವೆ ಆತ್‌ಂತ್ ತ್ರಿಳಿ.

**ನಂಜ :** ನಮ್ಮವರ ನಾ ಒಪ್ಸಿನೆ – ನಿಮ್ಮವರ ನೀ

**ಮಂಜ :** ನಾ ಒಪ್ಸಿನೆ. **ಅಂಜ ಬೇಡಲೆ ಸೀತೆ । ಮಿಥಿಲೇಂದ್ರ ತನು ಜಾತೆ ।** ನಿನ್ನ ಯಕ್ಷಗಾನದ ಗುರು ನಾ ನಿನ್ನ ಬಾವ ಆಕನ.

**ನಂಜ :** ಆಗಲಿ ಬಾವ. ಒಂದೇ ಚಪ್ಪರದಡಿ ಕೊಡುದು ತಾವುದು ಒಟ್ಟಿಗೆ ಆಗಲಿ

**ಮಂಜ :** ಆಗಲಿ ಮೊದ್ವೆ – ಹೊರಡಲಿ ದಿಬ್ಬಣ – **ಹೋಗಿ ಹೇಳಮ್ಮ ಹೊತ್ತು.....**

**ನಂಜ :** ಪೋಯಿ ಪೋಯಿ. ಹಾರಲಿ ರಥ. *(ಗತ್ತಿನಿಂದ ತೆರಳುವರು)*

# ಬೊಳ್ಪಾಕನ ಮುಗ್ತ್

## 8

*(ಸೋಂಪನ ಮದುವೆ ಮನೆ ಅಂಗಳಕ್ಕೆ ಚಪ್ಪರ ತೋರಣ. ಚಪ್ಪರದಡಿ ಒಂದೆರಡು ಕುರ್ಚಿ ಬೆಂಚು ಸ್ಟೂಲುಗಳು – ಅಲ್ಲೊಬ್ಬ ಇಲ್ಲೊಬ್ಬ ಆಗಾಗ ಅತ್ತಿತ್ತ ಸುಳಿದಾಡುತ್ತಿದ್ದಾರೆ)*

**ನಂಜ** : *(ಹಾಡಿನೊಂದಿಗೆ ಪ್ರವೇಶಿಸುತ್ತ)* **ಹೊಟ್ಟೆಯೊಳಗವಲಕ್ಕಿ ಕುಟ್ಟಿದಂತಾಗುತಿದೆ । ಬಟ್ಟೆ ಪೇಳೆಂದನು.** ಎಂತ ಮಾಡುದೀಗ ಈ ಮೊದ್ವೆ ಸುಧಾರಣೆಗಿಳ್ದ್ ಬಂದವ್ರ ಬಾಯಿಗೆ ನೀರುಟ್ಟೊ – ಬೊಳ್ಪಿಗೆ ಬಾವ ದಿಬ್ಬಣ ಹಿಂಬೊತ್ತಾದರೂ ಇಲ್ಲೆ. ಚಪ್ಪರದಡಿ ಜನನೆ ಇಲ್ಲೆ. ಒದೆನಿ – ಈ ನಾಯಿನೊಮ್ಮೆ ಕಟ್ಟಿ ಹಾಕಿ. ಅಡಿಗೆ ಸುಧಾರಣೆ ನಮ್ಮ ಗಂಗಯ್ಯಂದ್. ಅಂವ ಬಂದುಟ್ಟೊ ? ಗಂಗಸರ ಕುಡ್ದು ಅರ್ಧ ದಾರಿಲಿ ಬಿದ್ದುಟ್ಟೊ *(ದೂರಕ್ಕೆ ನೋಡಿ)* ಯಾರ್ ಬಾವುದಲ್ಲಿ ? ಹೋ ರಾಂಪ ಸಣ್ಣಪ ಬಂದ್ ಬುಟ್ಟೋ. ಇನ್ ತೊಂದರೆ ಇಲ್ಲೆ. ಬನ್ನಿ ಸಣ್ಣಪ ನಿಮ್ಮನ್ನೆ ಕಾಯೊದು *(ಗಟ್ಟಿಯಾಗಿ ಕರೆದು)* ಇಂದೆನಿ. ನೆಂಟ್ರ್ ಬಂದೊ. ಎಲ್ಲಿ ನೀರ್ ! *(ರಾಂಪನ ಪ್ರವೇಶ)*

**ಸೋಂಪ** : *(ಓಡಿಕೊಂಡು ಬರುತ್ತ)* ನಂಜ ! ಏನೋ ಕರ್ದಂಗೆ ಕೇಳ್ತ್ (ರಾಂಪನನ್ನು ನೋಡಿ ಕೈ ಮುಗಿದು) ಬನ್ನಿ ಬಾವ ನೀವ್ವೊಬ್ಬನೆ ! ಅಕ್ಕ ಮಕ್ಕ ಎಲ್ಲಿ? *(ಕೂಗಿ ಕರೆದು)* ನೆಂಟ್ರ್ ಬಂದೊ, ನೀರ್ ತನ್ನಿ.

**ರಾಂಪ** : ಎಲ್ಲ ಹಿಂದೆಂದ ಬಂದವೆ. ಸಾಕ್ ಸಾಕ್ ನೀರ್ ಬಂದಾಂಗೆ. ನಮ್ಮದೇ ಅಲ್ಲ ಸುಧಾರಣೆ ಎಲ್ಲಿ ದಿಬ್ಬಣ ಬಾತ್‌ಲ್ಲೆ ?

**ಸೋಂಪ** : ಇಲ್ಲೆ ಬಾವ ಈಗ ಬಾವುದು ಬಾಕಾತ್ ನಾವು ಅದರ್ನೆ ಕಾಯೊದ್ – ಬನ್ನೆ *(ಚಡಪಡಿಸುತ್ತ ಅತ್ತ ಹೋಗುವನು)*

**ರಾಂಪ** : ಏನಿಯಾ ನಂಜ, ಮೋಂಟ ನಿಮ್ಮಲ್ಲೆ ಈಗ ಉಟ್ಟು ಗಡ. ಅಲ್ಲಿಂದಳೇ ಬಾವುದಲ್ಲ ದಿಬ್ಬಣ.

**ಸೋಂಪ** : ಅದ್ ಹೇಂಗಾದೆ ಸಣ್ಣಪ. ಮೋಂಟನ ಕುಟುಂಬದವು ಸೋದರ ಎಲ್ಲ ನೆಟ್ಟಾರಿಲಿ ಇರುದು ಗಡ. ಅಲ್ಲಿ ಗುರುಕಾರ್ನೋರಿಗೆ ಇಸಿದ್ ಮದ್ರಂಗಿ ಮುಗ್ಸಿ ಅಲ್ಲಿಂದ ದಿಬ್ಬಣ ಬರೋಕಷ್ಟೆ.

**ರಾಂಪ** : ಹಾಂಗಾರೆ ಹೊತ್ತಿಗೆ ಸರಿಯಾಗಿ ದಿಬ್ಬಣ ಬಾರದ್. ಬಾಕನ ದಾರಿಲಿ ಎರಡ್ಮೂರು ಗುತ್ತಿಗೆ ಸಿಕ್ಕಿದೆ – ತಡಾದರೂ ಬಾರದೆ ಇರಿಕಿಲ್ಲೆ.

**ಸೋಂಪ** : ಬಂದರೂ ನಮ್ಮದೂ ತಯಾರಿ ಆಕೊಲೆ. ಹೆಮ್ಮಕ್ಕ ಮದ್ರಂಗಿ ಸೋಬಾನೆಂತ ಹಾಡ್ತಾ ಕುದ್ದೊಳೊ. ಮದ್‌ವಳಿಗೆನ ಬಟ್ಟೆಕಟ್ಟ್ ಇಲ್ಲಿ ಬುಡಸಿ ನೋಡ್ಕನ ಹೊಲೆಕೆ ಕೊಟ್ಟ ಕುಡುಂಬಿಲದ ಮದ್‌ಮಗಂದ್. ಮದ್‌ವಳಿಗೆದ್ ಅಲ್ಲಿ ಹೋಗಿರೋಕುಂತ ಇದರ ಹಿಡ್ಕಂಡ್ ಬದ್ಲಿಸಿ ತಾಕೆ ಕುಕ್ಕನ ಕಳ್ಸಿಟ್ಟು. ಅವ ಬಾಕಷ್ಟೆ *(ಹೊರನೋಡಿ)* ಬಾತ್‌ಂತ ಕಂಡದೆ. ಹೌದು ಅವನೆ. ಏನ್‌ಯಾ ಕುಕ್ಕ ಬಾರಿ ಜಲ್ದಿ ಬಂದೊಳ ? ಏನಾತ್ ?

**ಕುಕ್ಕ** : ನಾ ಅಲ್ಲಿವರೆಗೆ ಹೋತ್ತ್‌ಲ್ಲೆಣ್ಣ – ನಾ ಹೋಕನ ಅಲ್ಲಿಂದ ಕರಿಯ ನಮ್ಮ ಕಟ್ಟ್ ಹಿಡ್ಕಂಡ್ ಇತ್ತ ಬಂದದೆ. ಅವರ್ದ್ ಕೊಟ್ಟ್ ನಮ್ಮದ್ ತಂದೊಳೆ.

**ಸೋಂಪ** : ಹೆಚ್ಚು ನಡೀದು ಒಳ್ತ್. ಮದವಳಿಗೆನ ಕಟ್ಟ್ ಅದರ ಅಯ್ಯೆ ಹಕ್ಕಲೆ ಕೊಟ್ಟ್. ನೀ ಒಮ್ಮೆ ಆ ಗಂಗಯ ಬಂದುಟ್ಟೊ ನೋಡ್.

**ಕುಕ್ಕ** : ಆವುದಣ್ಣ *(ಹೋಗುವನು).*

**ನಂಜ** : ಆಚಾರಿಂದ ತಾವುದನ್ನೆಲ್ಲ ತಂದಾಗುಟ್ಟೊಂತ ನೋಡೋಕು. ತಾಳಿಕಂಟಿ ಬಳೆ ಕಾಲುಂಗುರ ಮೂಗುತಿ ಎಲ್ಲ.

**ರಾಂಪ** : ಅದೆಲ್ಲ ಗಂಡಿನ ಕಡೆವು – ಬಣ್ಣ ಬಂಗಾರ ಇಸಿಕನ ಕೊಡುದಲ್ಲೆಯ ! ಮೊದಳಿಗೆಗೆ ಅದರ ಮೈಯಲ್ಲಿದ್ದದ್ ಸಾಕ್.

**ನಂಜ** : ಇಲ್ಲೆ ಸಣ್ಣಪ. ಇದ್ ಧರ್ಮದಾರೆ ಗಡ – ಮೊದುಮಂಜ ಮೋಂಟಿ ಏನೂ ಹಾಕಿಕಿಲ್ಲೆ. ಸೋಂಪ ಮಾವ ಮಾಡಿಕೊಟ್ಟದರ ಗೂಡೆ ಕುತ್ತಿಗೆ ಕಟ್ಟುದಷ್ಟೆ. ನಾ ಸೋಂಪ ಮಾವನ ಇತ್ತ ಕಳ್ಸಿನೆ *(ಹೋಗುವನು)*

**ರಾಂಪ** : ಅದ್ ಕೂಡಾ ತಯಾರಾಗುಟ್ಟೋ ಕೇಳ್ *(ದನಿಯೆತ್ತಿ)* ಇಂದೇನಿ ಮೊದೊಳಿಗೆನ ಅಪ್ಪ ಬನ್ನಿ ಇತ್ತ.

**ಸೋಂಪ** : *(ಅವಸರದಿಂದ ಬರುತ್ತ)* ಬನ್ನೆ ಬನ್ನೆ ಯಾಕ್ಬಾವ ದಿಬ್ಬಣ ಬಾತೊ

**ರಾಂಪ** : ದಿಬ್ಬಣ ಬರೋಕಷ್ಟೆ. ಆಚಾರಿ ಹಕ್ಕಲೆ ಮಾಡ್ಸಿಕೆ ಹಾಕಿದ್ದೆಲ್ಲ ಬಂದುಟೊಂತ ಕೇಳಿಕೆ.

**ಸೋಂಪ** : ಇಂದ್ ತಾಳಮದ್ಲೆ ಉಟ್ಟಲೆಬಾವ. ಲಿಂಗಪ್ಪಾಚಾರಿ ಬಾಕನ ತಂದನೇಂತ ಹೇಳ್ಯುಟ್ಟು.

**ರಾಂಪ** : ನಿನ್ನ ಆ ತಾಳಮದ್ಲೆ ಆಚಾರಿನ ನಂಬಿರೆ ಆಗಾದ್. ಈಗಲೇ ಜನ ಹೋಗಿ ತರೋಕು.

**ಸೋಂಪ** : *(ಅತ್ತಿತ್ತ ನೋಡಿ)* ಯಾರ್ನ ಕಳ್ಸುದು ? ನಾನೇ ಹೋಕಷ್ಟೆ.

**ರಾಂಪ** : ನೀ ಅತ್ತ ಹೋಕನ ಇಲ್ಲಿ ದಿಬ್ಬಣ ಬಂದರೆ..

**ಸೋಂಪ** : ಅದ್ ಸರಿ. ಬೇರೆ ಜನ ನೋಡ್ನೆ *(ಹೋಗಿ ಬಂದು)* ಅದರ ನಮ್ಮ ಸೀನಪ್ಪನಲ್ಲಿ ಹೇಳಿಟ್ಟು

ಬಾವ. ಈ ಮೊದ್ವೆ ಅವಸರಲಿ ಯಾದ್ᵒ ನೆಂಪಿಗೆ ಬಾದುಲ್ಲೆ.

**ರಾಂಪ** : ಸೀನಪ್ಪನೂ ಮರೆಕಿಲ್ಲೆಲೆ

**ಸೋಂಪ** : ಇಲ್ಲೆಂತ ತಾವುದು *(ದೂರಕ್ಕೆ ನೋಡಿ)* ಅದೆನಿ – ಸೀನ ಬಾತ ಉಟ್ಟು *(ಬರುತ್ತಿರುವ ಸೀನನಲ್ಲಿ)* ಏನಿಯಾ ಸೀನ ಆಚಾರಿ ಕೈಂದ ತಂದಳೊ –ಬುಟ್ಟು ಬಂದೊಳೊ ?

**ಸೀನ** : *(ಬರುತ್ತ)* ತಾಕೆ ಆಕ್ಕೊಲೆ ಅಲ್ಲಿ. ಮೂರ್ತಾ ಆತ್‌ಲ್ಲೆ. ನಾ ಅವನ ಅಂಗಳ ಹತ್ತಿಕನ ಕೇಳ್‌ದೆ ಅವನ ಸುತ್ತಿಗೆ ಪೆಟ್ಟ್ ಜತೆ ಪದ. **ಏನಮಾಡಲೀ ನಾನು। ಪಾಂಡವ ಸೋಲಿಪಡೆ ।** ಜಗಲಿ ಹತ್ತಿಕನ ಅವನ ಆಚಾರ್ತಿ ಗಂಡನ ಕೆಬಿಲಿ ಏನೋ ಪಿಸಿಪಿಸಿ ಮಾತಾಡಿ ಒಳ ಹೋತ್. ನನ್ನ ನೋಡಿದ ಕೂಡ್ಲೆ ಆಚಾರಿ ಸುತ್ತಿಗೆ ಪೆಟ್ಟ್ ಬದಲಿಸಿತ್. **ಬಿಡುಬಿಡು ಶೋಕವ । ನುಡಿಯನು ಲಾಲಿಸು । ಪೊಡವಿಪ ಕೌರವನೇ.** ಪದ ನಿಲ್ಸಿ ಹೇಳ್ತ್. ಕುಡುಂಬಿಲದ್ ಈಗ ಮುಗ್ಸಿ ಕೊಟ್ಟಾತ್. ಸೋಂಪಣ್ಣಂದ್ ಈಗ ಹಿಡ್ದೊಳೆ ಆತ್ ಈಗ ಆದೆ. ಒಪ್ಪ ಕೊಡಿಕೆ ಮಾತ್ರ ಬಾಕ್ಯುಟ್ಟು. ನೀ ಯಾಕೆ ಸೀನಣ್ಣ ಕುದ್ರುದು. ನಾ ಬಾಕನ ತನ್ನೇಂತ ಹೇಳ್ಯೊಳೆ. ದಿಬ್ಬಣ ಬಾಕನ ಗರ್ನಾಲು ಕೇಳುದು ಅದ್ ಕೇಳ್ಕನ ನಾ ಎದ್ದ್ ರೆಡಿ ಮಾಡಿ ತನ್ನೆ. ನೀ ಹೋಗುಂತ ಹೇಳಿ. ವಾಟೆಕೊಳವೆಲಿ ಊದಿಕೆ ಸುರುಮಾಡ್ತ್. ನಿನ್ನ ಸುಡಲಿಂತ ನಾ ಇತ್ತ ಎದ್ದ್ ಬಂದೆ.

**ರಾಂಪ** : ಆ ಆಚಾರಿನ ನಂಬಿರೆ ಆಕಿಲ್ಲೆ. ಇಂದಾ ಆ ಕುಕ್ಕನ ಬಾಕೆ ಹೇಳ್ ಅವನೇ ಆಕು ಇದಕ್ಕೆ.

**ಸೀನ** : ಂದಾ ಕುಕ್ಕಪಣ್ಣ – ನೀ ಇತ್ತ ಬರೋಕಡ.

**ಕುಕ್ಕ** : *(ಬರುತ್ತಾ)* ಯಾಕಣ್ಣ ಕರ್ದದ್ ?

**ರಾಂಪ** : ನೀ ಜಲ್ದಿ ಹೋಗಿ ಆಚಾರಿ ಕೈಲಿ ಮಾಡ್ಸಿಕೆ ಕೊಟ್ಟ ತಾಳಿ ಮೂಗುತಿ ಬಂಗಾರ ಎಲ್ಲ ತರೋಕು. ಬುಟ್ಟು ಬಾಕೆ ಬತ್ತ್ – ಹೊತ್ತಾದರೂ ಸರಿ ಕುದ್ದೆ ಮಾಡ್ಸಿ ತರೋಕು.

**ಕುಕ್ಕ** : ಆವುದಣ್ಣ ತನ್ನೆ *(ಹೋಗುವನು)*

**ನಂಜ** : *(ಪ್ರವೇಶಿಸುತ್ತಾ)* ಎಂತಾ ಮಾಡುವೆ ದಿಬ್ಬಣದವ್ರು. ಹೊತ್ತು ಮುಳುಗಿಕೆ ಆತ್. ಇನ್ನ್ ಸನ ಪತ್ತೆ ಇಲ್ಲೆ.

**ರಾಂಪ** : ಬಾವ್ಯೊಯ. ದೂರದ ದಾರಿ – ನಮ್ಮದೂ ಇಲ್ಲಿ ತಯಾರಿ ಆಕೊಸ್ಟೆಲ್ಲಾ. ನಿಮ್ಮ ಮೇಳದವೆಲ್ಲ ಇನ್ನ್ ಬಾತಿಲ್ಲೆ.

**ನಂಜ** : ಬಂದವೆ – ದಿಬ್ಬಣಕ್ಕೆ ಮುಂದೆ ಬಾವ್ರೊ. ಅದೆನಿ ಪದ ಕೇಳ್ದೆ *(ದೂರದಿಂದ)* **ಬಂದನಾಗ। ರಥದಲಿ । ಬಂದನಾಗ.** ಬಚಾವು. ಬಂದೊ. ಮಂಜ ಬಾವ ಬಾತ್‌ಂತ ಕಂಡದೆ. ಅವನ ಹಿಂದೆ ಎಲ್ಲಾ ಇರುವ್ರೊ.

**ಮಂಜ** : *(ಗತ್ತಿನಿಂದ ಪ್ರವೇಶಿಸುತ್ತಾ)* **ಏನಾಯಿತಿಂದಿನಾ ಹವದಿ ಕಲಿ ಕರ್ಣ.** ಸುಧಾರಣೆ ಎಲ್ಲಿವರೆಗೆ ಆತ್? ದಿಬ್ಬಣ ಬಾತೊ.

**ನಂಜ** : ಬಂದದೆ ಬಾವ – ಈಗ ಬಾವ್ರುದು *(ದೂರದಿಂದ ಗರ್ನಾಲು ಶಬ್ದ ಕೇಳಿ ಬರುವುದು)* ಹ್ಞಾಂ. ಬಾತ್ – ದಿಬ್ಬಣ ಬಾತ್. ಸಣ್ಣಪ ನೀವು ಇಲ್ಲಿ ನೋಡಿ – ನಾ ಬಾವನ ಜೊತೆ ಚಪ್ಪರದಡಿಗೆ

ಹೋನೆ. *(ಮುಂದಾಗಿ ಕರೆಯುತ್ತಾ)* ಎಲ್ಲಿ ಮೊದ್ವೆ ಮನೆವ್ರು ? ನೆಂಟ್ರ್ ಬಾತ ಒಳೊ – ಇಲ್ಲಿ ಹಸೆ ನೀರ್ ವೀಳ್ಯ ಹರಿವಾಣ ಎಲ್ಯುಟ್ಟು – ಸೀನ ! ಆ ಗೇಸ್‌ಲೈಟಿನ ತಂದ್ ತೂಗ್‌ಸ್ಯಾ *(ಪೆಟ್ರೋಮೇಕ್ ತೂಗಿಸುವರು)*

**ಮಂಜ : ಲೇಸಾಯಿತಯ್ಯ ಸಂನ್ಯಾಸಿ ನಿಮ್ಮ ಚರಣಕ್ಕೆ ಸಾಸಿರ ಶರಣೆಂಬೆನು.** ಈಗ ಮೊದ್ವೆ ಚಪ್ಪರಂತ ಕಂಡದೆ.

**ನಂಜ** : ಎಲ್ಯುಟ್ಟು ಕುರ್ಚಿ. ಊರ ಗೌಡ ಮಂಜು ಬಾವನ ಕುದ್ರಿಸಿ.

**ಮಂಜ** : ನಂಜಾ ! ಸಾಕ್ ಸಾಕ್ ಉಪಚಾರ. ಬೊಬ್ಬೆ ಹೊಡೀಬೇಡ. ಅವ್ರು ಕೈ ಕಾಲಿಲಿ ಬಿದ್ದವೆ. ದಿಬ್ಬಣಲಿ ಯಾರಾರ್ ಒಳೊಂತ ನೋಡುಮೊ ಬಾ *(ಮಂಜ ನಂಜನ ಜತೆಯಾಗಿ ಪಕ್ಕದ ರಾಂಪಣ್ಣನ ಬಳಿ ಹೋಗಿ ನೋಡಿ)* ಅಹಹ – ಭಾರೀ ಜನ ಬರ್‍ತಾ ಒಳೊ *(ಅಭಿನಯದಿಂದ)* **ಧನುವೆತ್ತಲಾರೆ ಕೂರ್ಗಣೆ ತೊಡಲಾರೆನು । ಕರ್ಣನಾರ‍್ಯೆ.** ನಂಜಾ ದಿಬ್ಬಣಲಿ ಆ ದೊಡ್ಡ ಮುಂಡಾಸ್‌ನ ಕೊಡಿಯಾಳ್ ಯಾರ್‌ಯಾ ?

**ನಂಜ** : ಅದ್... ಅದ್..

**ರಾಂಪ** : ಅದ್..ಅದ್.. ಅದ್ ನಿನ್ನ ಅಪ್ಪ ಅಲ್ಲಯ. ದೊಡ್ಡ ಮುಂಡಾಸ್ ಕಟ್ಯೊಳೊಂತ ನಿಂಗೆ ಗುರ್ತು ಹಿಡೆಕೆ ಆದುಲ್ಲೆ !

**ಮಂಜ** : ಹೌದೌದ್ ನಾಗಪ್ಪ ಮಾವ. ಅವರ ಹಿಂದೆ ನಡುಮನೆ ಅತ್ತೆ ಅವರ ಮಗ ಎಲ್ಲಾ ಒಳೊ – ಹಿಂದೆ ಆ ಅಜ್ಜಪ್ಪ ಒಬ್ಬ ದೊಣ್ಣೆ ಕುಟ್ಟಿಕೊಂಡು ಬಂದವಲೆ **ತಾತನೆ ನೀ ಕೇಳ್ ಯಾತಕೆ ಪೊರಡುವೆ । ಆ ತರಳೆಯ ತರಲು.** ಮೊದುಮಂಜನ ಹಿಂದೆ ಮುಂದೆ ಬಾರಿಜನ ಒಳೊ.

**ಕುಶಲ** : *(ಬಂದು ನೊಡುತ್ತ)* ಹೌದಲೆ. ಕುಳ್ಳುಂದ ಮಜಲಿಗೆ ಜಾನ್ವಾರ್ ಇಳ್ದಾಂಗೆ ಬಾತೊಳೊ.

**ರಾಂಪ** : ಎಲ್ಲಿ ಮನೆ ಯಜಮಾನ್ರ್. ಒದೆನಿ ಸೋಂಪಣ್ಣನ ಮನೆಗೆ ದಿಬ್ಬಣ ಬಂದೊಂತ – ಮಜ್ಲಿಂದ ದಿಬ್ಬಣದವ್ರು ಕರ್ದ್ ಹೇಳಿವೆ. ಅಲ್ಲಿ ಬಿಸಿಲ್ ಚಪ್ಪರಕ್ಕೆ ಬೆಲ್ಲ ನೀರ್ ಕಳ್ಸಲಿ.

**ಸೋಂಪ** : *(ಓಡಿ ಬಂದು)* ಎಂತ ಮಾಡುದು ಭಾವ – ಇಲ್ಲಿ ಯಾರ್ ಕಾಂಬೊದಿಲ್ಲೆ. ಎಲ್ಲ ಕೈ ಕಾಲ್‌ಲಿ ಓಡ್ತಾ ಒಳೊ.

**ರಾಂಪ** : ಇಲ್ಲಿಗೇ ಕರ್‍ಕಂಡ್ ಬಾವ್ರೊ – ಚಪ್ಪರದಡಿಲೆ ಸುದಾರಣೆ ಆಗಲಿ *(ಮಂಜನಲ್ಲಿ)* ಆಗದೊ ಗೌಡ್ರೆ ! ಮಂಜಣ್ಣ – ನಿನ್ನ ಅಪ್ಪ ಬಾತ್‌ಲ್ಲೆ – ಈಗ ನೀನೆ ಊರ ಗೌಡ. ಆ ಒತ್ತ್ ಗೌಡನ ಕರಿ.

**ಮಂಜ** : ಆದು ಆದು. ನಾನೇ ಕರ್ದನೆ. **ಬನ್ನಿರೈ ಸಂಸಾರ ಶರಧಿಯನು ದಾಂಟುವರು** । ಬನ್ನಿರೈ. ಬಂದವೆ ನೋಡಿ – ನಡೆಯಲಿ ಮೊದುವೆ.

**ರಾಂಪ** : *(ಮತ್ತೊಂದು ಪಕ್ಕಕ್ಕೆ ಹೋಗುತ್ತ)* ಎಲ್ಲಿ ಹೆಮ್ಮಕ್ಕ – ಆರತಿ ಸೋಬಾನೆ *(ಚಪ್ಪರದಲ್ಲಿ ಮತ್ತಷ್ಟು ಗಡಿಬಿಡಿ. ಇರುವವರು ಅತ್ತಿತ್ತ ಓಡಾಡುವರು. ದಿಬ್ಬಣದವರು ಚಪ್ಪರದಡಿ ಕುಳಿತುಕೊಳ್ಳುವರು)* ಇಂದೆನಿ. ಮೊದ್ವೆ ಮನೆ ಯಜಮಾನ್ರ್ ! ಮಾಗಣೆ ಗೌಡ್ರ್ ಬಂದೊ ಮಾಗಣೆ ಕಟ್ಟೆಮನೆಗೆ ಜೋಡು ಮರ‍್ಯಾದಿ ಗೊತ್ತುಟ್ಟಲೆ. ಆ ಬೆಂಚಿಗೆ ಹಸೆ ಹಾಸಿ. ಬಂದವಕ್ಕೆ ಬೆಲ್ಲ ನೀರ್ ಕೊಟ್ಟಾತೊ.

**ಸೋಂಪ** : ಎಂತ ಮಾಡುದು ಬಾವ–ನಂಗೆ ಇರುದು ಎರಡೇ ಕೈಕಾಲ್. ಎಲ್ಲ ಅತ್ತಿತ ನೋಡ್ತಾ ಓಡುವೆ.

**ಮಂಜ** : **ಅಳುವುದೇತಕೆ ನೀತಾರೆ**. ಸೋಂಪಜ್ಜಪ. ನೀವು ಕೈಕಾಲ್ ಹೊಡಿಬೇಡಿ. ತಲೆ ಬೆಳ್ದ ರಾಂಪ ಸಣ್ಣಪೊಳೊ ಎಲ್ಲ ಅವು ಹೇಳ್ವೆ – ನಮ್ಮ ಮೇಳದವು ಸುಧಾರಣೆ ಮಾಡ್ವೆ *(ರಾಂಪನಲ್ಲಿ)* ಸಣ್ಣಪ ನೀವು ಅತ್ತಹೋಗಿ ಸುಧಾರಣೆ ಒಂದು ಆಗಲಿ.

**ರಾಂಪ** : *(ಚಪ್ಪರದಲ್ಲಿ ತಲೆ ಮುಂಡಾಸು ಸುತ್ತಿಕೊಂಡು)* ಎಲ್ಲಿ ನೀರಿನವು ? ಎಲ್ಲಾ ಕುದ್ದೊಳೊ *(ದನಿಯೆತ್ತಿ)* ಕುಸಲಾ ! ಎಲ್ಲಿ ಒಳೆಯಾ ?

**ಕುಶಲ** : *(ಬೀಡಿ ಸೇದಿ ಹೊಗೆ ಬಿಡುತ್ತ ಬಂದು)* ಯಾಕೆ ಮಾವ ಕರ್ದದ್ದ್

**ರಾಂಪ** : ನೀರ್, ನೀರ್ ಬರಲಿ ಮೊದಲ್

**ಕುಶಲ** : ನೀರ್, ನೀರೇಲ್ಲಿಟ್ಟುಂತ

**ಸೋಂಪ** : ಆಚೆಂಬಿಲುಟ್ಟು ತಕ

**ಕುಶಲ** : *(ಒಳಗೋಡಿ ಬಂದು)* ಅದರ್ಲಿ ನೀರಿಲ್ಲೆ

**ಸೋಂಪ** : ಆ ಕೊಡಪಾನಲಿ ನೋಡ್‌ಯಾ

**ಕುಶಲ** : ನೋಡ್ನೆ *(ಮತ್ತೆ ಹೋಗಿ ಬಂದು)* ಅದ್ ಖಾಲಿ ಕೊಡ್ಪಾನ.

**ರಾಂಪ** : ಆ ಬೀಡಿ ಅತ್ತ ಬಿಸಾಡ್– ಬಾವಿಂದ ಪಕ್ಕ ಒಂದು ಕೊಡ್ಪಾನ ನೀರ್ ಎಳ್ಕ.

ಕುಶಲ : *(ಅತ್ತ ಓಡಿ ಮತ್ತೆ ಬಂದು)* ಬಾವಿಲಿ ಹಗ್ಗ ಇಲ್ಲೆ. ಹಗ್ಗ ಎಲ್ಲುಟ್ಟು ?

**ಸೋಂಪ** : ಅಲ್ಲಿ ಕೊಟ್ಟಿಗೆಲಿ ಇರೋಕು ನೋಡ್

**ಕುಶಲ** : *(ಹೋಗಿಬಂದು)* ಕೊಟ್ಟೆಗೆಗೆ ಬೀಗ ಹಾಕುಟ್ಟು

**ರಾಂಪ** : ಬೀಗದ ಕೈ

**ಸೋಂಪ** : ಅದ್..ಅದ್... ಸೂರಪ್ಪನ ಕೈಲಿ ಇರೋಕು

**ರಾಂಪ** : ಕರಿ ಅವನ

**ಕುಶಲ** : ಅವ ಧಾರೆ ಬಟ್ರ ಕರ್ಕೊಂಡು ಬಾಕೆ ಹೋಗುಟ್ಟು

**ರಾಂಪ** : ಮೊರ್ಲಾತ್, ಏನಾರ್ ಮಾಡಿ ಚಪ್ಪರಲಿ ಬಂದವರ ಸುಧಾರಣೆ ಮಾಡಿಯ ಕುಸಲ.

**ಕುಶಲ** : ಅದ್ ಮಾಡ್ನೆ *(ಕುಳಿತಿರುವ ಮುದುಕರೊಬ್ಬರ ಬಳಿ ಹೋಗಿ)* ಏನ್ ಅಜ್ಜಪ ನಿವ್‌ಗೆ ಗುದ್ದೊಕೊ ಹೇಂಗೆ *(ಮತ್ತೊಬ್ಬರಲ್ಲಿ ಹೋಗುತ್ತ)* ಎಂತ ? ಹೊಸೊಪ್ಪೊ? ತನ್ನೆ ತನ್ನೆ *(ಮತ್ತೊಂದೆಡೆ ಹೋಗಿ)* ಮಕ್ಕಳಿಗೆ ಬೆಲ್ಲ ನೀರೊ – ತಂದವೆ – ಬಂದವೆ.

**ರಾಂಪ** : ಧಾರೆಗೆ ಹೊತ್ತಾತ್, ಎಲ್ಲಿ ಗೂಡೆನಪ್ಪ *(ಬಂದ ಸೋಂಪನಲ್ಲಿ)* ಒಂದ್ ಮುಂಡಾಸ್ ಕಟ್ಟಿಕಯ, ಬಣ್ಣ ಬಂಗಾರ ತೆಕಂಡ್ ಮೊದಳಿಗೆನ ಉತ್ತಾಯ್ದ ಮುಗ್ಸಿಕೆ ಹೆಮ್ಮಕ್ಕ ಜಟ್‌ಪಟ್ ಮಾಡಲಿ.

**ಸೋಂಪ** : *(ತಲೆಗೆ ವಸ್ತ್ರ ಸುತ್ತಿಕೊಂಡು)* ಮಾಡ್ತಾ ಒಳೊ ದಾರೆಗೆ ಬಟ್ರ್ ಬರೋಕಲೆ

**ರಾಂಪ** : ಕರ್ಕಂಡ್ ಬಾಕೆ ಜನ ಹೋತ್‌ಲ್ಲೆ

**ಸೋಂಪ** : ಸೂರಪ್ಪ ಹೋಗುಟ್ಟು. ಬಾಕೆ ಅತ್ *(ದೂರಕ್ಕೆ ನೋಡಿ)* ಅದೆನಿ ಬಾತ್ *(ಒಬ್ಬನನ್ನೆ ನೋಡಿ)* ಏನಿಯಾ ಒಬ್ಬನೆ, ಬಟ್ರ್ ಎಲ್ಲಿ

**ಸೂರಪ್ಪ** : ಬಟ್ರಿಗೆ ನೇವಸ ಜೋರುಟ್ಟು – ಕುಡ್ದು ಗುಡಿ ಹಾಕಿ ಮನ್‌ಗ್ಯೊಳೊ

**ಸೋಂಪ** : ಎಂತ ಮಾಡುದೀಗ ಬಟ್ರಿಲ್ಲದೆ. ಬೇರೆ ಭಟ್ರ್...

**ರಾಂಪ** : ಬೇರೆ ಯಾರ್ ?

**ಸೋಂಪ** : ನಮ್ಮ ಮಜ್ಲ್‌ಕರೆ ಬಟ್ರ ಮಂಜ ಮಾಣಿ ಇರಿಕೆ ಸಾಕ್

**ರಾಂಪ** : ಆ ಮಾಣಿ ಪೇಟೆಲಿ ಹೋಟ್ಲ್‌ಲಿ ಇತ್ತ್. ಅದಿಕ್ಕೆ ಎಂತ ಗೊತ್ತು ಮಂತ್ರ, ಕರೇಕೆ ಇನ್ನೆಲ್ಲಿಟ್ಟು ಪುರ್ಸೊತ್ತು. ಹೋಕೆ ದೂರ ಎಷ್ಟುಟ್ಟು? ನಾ ಹೇಳೊಕೊ... ಬಟ್ರ ಬದ್ಲ್ ಊರ ಗೌಡರೆ ನಿಂತ್ ಮೊದ್ವೆ ಮಾಡಿಸಲಿ, ನಮ್ಮ ಊರ ಗೌಡ್ರ ಮಂಜ ಮಂಜ ಉಟ್ಟಲೆ. ಅವನ ಅಭಿಪ್ರಾಯ ಕೇಳುಮೊ. ಂದಾ ನಂಜ ! ನಿನ್ನಪ್ಪನೂ ಇತ್ತ ಬರಲಿ.

**ಸೋಂಪ** : ಆಗಲಿ ಬಾವ – ಸುದಾರಣೆ ಮಾಡಿ ಬುಡಿ, ಧಾರೆ ಒಂದು ಆಗಲಿ

**ಮಂಜ** : *(ಬರುತ್ತ)* ಯಾಕೆ ಕರ್ದದ್ ಸಣ್ಣಪ ! ಏನಾಕ್ಕು ಹೇಳಿ,. **ಅತಳ ವಿತಳ ಸುತಳ ತಳಾತಳ ಪಾತಾಳ**..

**ರಾಂಪ** : ಅದೆಲ್ಲ ಬೇಡ – ಈಗ ದಾರೆಗೆ ಭಟ್ರಿಲ್ಲೆ – ಊರ ಗೌಡರೆ ಸುದಾರ್ಸಿ ಕೊಡೊಕುಂತ ನಿನ್ನಲ್ಲಿ ಕೇಳುದು.

**ಮಂಜ** : ಆವುದು. **ಆಯಿತು ಸೇತು ಕಟ್ಟಿ ರಾಜೇಂದ್ರ**. ಆಗಲಿ ದಾರೆ.

**ರಾಂಪ** : ಧಾರೆ ಆವ ವರೆಗೆ ನಿನ್ನ ಪದ ನಿಲ್ಸ್ ಮಾರಾಯ – ಮೊದ್ವೆ ಒಂದು ಮುಗಿಯಲಿ.

**ಮಂಜ** : ಆವುದು ಸಣ್ಣಪ – ನೀವು ನಾಗಪ್ಪ ಮಾವ ಮಾಗಣೆ ಗೌಡ್ರ್ ಕೂಡಿ ಸುದಾರಣೆ ಮಾಡಿ – ನಂಜಾ ನೀ ಇತ್ತಾ ಬಾ. ಸಣ್ಣವ್ರು ಅದ್ರಲ್ಲಿ ತಲೆ ಹಾಕಿಕೆ ಬತ್ತ್.

**ಸೋಂಪ** : ಎಂತ ಮಾಡುದು ನಾಗಪ್ಪಣ್ಣ. ಧಾರೆಗೆ ಆ ಮಾಣಿನ ಕರ್ದರೆ ಆಗದೊ ?

**ನಾಗಪ್ಪ** : ಥೂ ಅದರ, ಆದ್ ರಾತ್ರಿ ಮನೇಲಿರಿಕಿಲ್ಲೆ. ಎಲ್ಲಿಯೊ ಜುಗಾರಿ ಆಡ್ತಾ ಇರುದು. ಕಳ್ದ ವರ್ಸ ಮುಳ್ಯಲಿ ದಾರೆ ಭಟ್ರ್ ಸಿಕ್ಕಿತ್‌ಲ್ಲೆಂತ ಪೇಟೆಲಿ ಶಾಲೆಗೆ ಹೋತಿದ್ದ ಮಾಣಿನ ಕರ್ಸಿದ್ – ತಾಳಿನ ಮೊದುಮಂಜನ ಕೈಲಿ ಮೊದ್ದೊಳಿಗೆ ಕಟ್ಸದೆ ಮಾಣಿಯೆ ಗೊಡೆಗೆ ಕಟ್ಟಿದ್. ಅಲ್ಲಿ ಗಲಾಟೆ ಆದ್ದ್ ಗೊತ್ತುಟ್ಟಲೆ.

**ರಾಂಪ** : ಆ ಗೂಡೆನ ದಿಬ್ಬಣದವು ಬುಟ್ಟೇ ಹೊರಟದ್ ಗಡ. ಪಾಪ ಗೂಡೆಗೆ ಗತಿಯಿಲ್ಲದಂಗಾತ್.

**ನಾಗಪ್ಪ**: ಇಲ್ಲೆಯ ಎರಡ್ದಿನ ಗೂಡೆ ಮನೆಲಿತ್ತ್. ಅದರ ಅಪ್ಪ, ಅಯ್ಯೆ ಗೂಡೆನ ಕರ್ಕಂಡು ಹೋಕೆ ಬಾವ್ರೊಂತ ಕಾದೊ. ಅವು ಬಾತ್‌ಲ್ಲೆ. ಮೂರನೆ ದಿನ ನೋಡ್ಕನ ಗೂಡೆ ಮನೆಲಿಲ್ಲೆ. ಆ ತಾಳಿ ಕಟ್ಟಿದ ಮಾಣಿನೂ ಊರ್‌ಲಿಲ್ಲೆ, ಮತ್ತೆ ಕೇಳ್ಕನ ಮಾಣಿಗೂ, ಗೂಡೆಗೂ ಸಾಲೆಗೆ ಹೋಕನನೆ ಚಂಙಾಯಿ ಇತ್ತ್ ಗಡ.

**ರಾಂಪ** : ಮೋಸ ಇಲ್ಲೆ, ತಾಳಿ ಕಟ್ಟಿಯೇ ಮಾಣಿ ಗೂಡೆನ ಹಾರ್ಸಿಕಂಡ್ ಹೋಗುಟ್ಟು.

**ನಾಗಪ್ಪ** : ಗೂಡೆನೂ ಅಷ್ಟೆ ತಾಳಿ ಕಟ್ಟಿಕಂಡೇ ಹಾರಿ ಹೋಗುಟ್ಟು. ಹೋಗಲಿ, ಹಾಂಗೆಂತ ಆ ಕಡೆ ಈಗ ದಾರೆಗೆ ಭಟ್ರ ಕರ್ಸುದು ನಿಲ್ಸೊಯೊಳೊ ಗಡ. ಊರ ಗೌಡರೆ ನಿಂತ್ ಮೊದ್ವೆ ನಡ್ಸುದು.

**ರಾಂಪ** : ನಮ್ಮೂರಲ್ಲೂ ಅದರ ಸುರು ಮಾಡುಮೊ. ಇಲ್ಲೆ ಸುರು ಆಗಲಿ ! ಆ ಸೋಂಪನ ಕರಿನಿ. ಎಲ್ಲಿ ಸೋಂಪಣ್ಣ – ಎಲ್ಲಿ ವಾಲಗದವು – ಊದಲಿ ವಾಲಗ *(ಬರುತ್ತಿರುವ ಸೋಂಪನಲ್ಲಿ)* ಏ ಗೂಡೆನಪ್ಪ – ತಲೆಗೆ ರುಮಾಲ್ ಕಟ್ಟಿಕಯಾ – ಯಾಕೇ ನಿಂತೊಳ – ಗೂಡೆನ ಸೋದರ ಮಾವ ಮೊದೊಳಿಗೆನ ಚಪ್ಪರದಡಿ ತರಲಿ ಮೊದ್‌ಮಂಜ ಮೊದೊಳಿಗೆನ ಅಡ್ಡತೆರೆ ಹಿಡೆನಿ – ಧಾರೆ ಮಂಟಪಲಿ ಹಾಕಲಿ ಮಾಲೆ. ಆಗಲಿ ಧಾರೆ *(ತುಸು ಹೊತ್ತು ವಾಲಗ ಸದ್ದಿನಲ್ಲಿ... ಮಾಡ್ವೆಂತ ಹೇಳ್ವೆ... ಹಾಂತ ಹೇಳ್ವೆ ಎಂಬ ಉದ್ಘೋಷಗಳು ಕೇಳಿ ಬಂದು ಮತ್ತೆ ಶಾಂತವಾಗಿ – ವಾಲಗದ ದನಿಯೂ ನಿಲ್ಲುವುದು. ಚಪ್ಪರದಡಿ ಬೆಳಕು ಮಂದವಾಗುವುದು. ತುಸು ಹೊತ್ತು ಕಳೆದು ಚಪ್ಪರದಡಿಗೆ ಆಟದ ಮೇಳದವರ ಪ್ರವೇಶ)*

**ಮಂಜ** : *(ಪ್ರವೇಶಿಸುತ್ತ)* ಕುಕ್ಕ ! ಆ ಲೈಟ್ ನಂದಿದೆಂತ ಕಂಡದೆ ಎಣ್ಣೆ ಉಟ್ಟೊ ನೋಡಿ ಒಸಿ ಗಾಳಿ ಹಾಕ್ *(ಲೈಟಿಗೆ ಕುಕ್ಕ ಗಾಳಿ ಹಾಕುತ್ತಾನೆ. ಮತ್ತೆ ಚಪ್ಪರದಡಿ ಬೆಳಕು ಬರುತ್ತದೆ)* ಎಲ್ಲವ್ವೂ ಊಟ ಆತೊ? ಊಟ ಆಗದವು ಊಟ ಮಾಡಲಿ, ನಿದ್ದೆ ಬಾವವು ನಿದ್ದೆ ಮಾಡಲಿ. ಇನ್ನ್ ನಮ್ಮ ತಾಳಮದ್ದಳೆ ಸುರು ಮಾಡೊಮು. ಮದ್ದಳೆ ಆಚಾರಿ ಬಾತಿಲ್ಲೆ ?

**ಕುಶಲ** : ಬಂದೊಳೊ – ಅಲ್ಲಿ ಮದ್ದಳೆ ಬಾರ ಎಳ್ದ್ ಸರಿ ಮಾಡಿವೆ *(ಮರೆಯಲ್ಲಿ ಧೀಂ–ತಾಂ–ಧೀಂ ಸ್ವರ ಕೇಳಿ ಬರುವುದು)*

**ಮಂಜ** : ಬಾಗವತರ್ ಬಾತ್‌ಲ್ಲೆ – ಊರಿಗೆ ಹೋಗಿ ತಿಮ್ಮಪ್ಪ ಮಾಸ್ಟ್ರ ಕೈಕೊಟ್ಟೊ.

**ಕುಶಲ** : ಏನ್ ಬಾತಿಲ್ಲೆ – ಮೊದ್ವೆ ಹೇಳಿಕೆ ಮಾಡ್ಯೊಳೊ ಮಾಸ್ಟ್ರಿಗೆ ?

**ಮಂಜ** : ಎಲ್ಲ ಆಗುಟ್ಟು, ತಾಳಮದ್ಲೆ ಉಟ್ಟುಂತ ಗೊತ್ತುಟ್ಟು.

**ಕುಶಲ** : ಮಾಸ್ಟ್ರಿಗೆ ಬಾಕೆ ಹಿಂಬೊತ್ತಿಗೆ ಬಾವ ಬಸ್ ತಪ್ಪಿರುದೊ ಏನೊ !

**ನಂಜ** : ಅವು ಬಂದರೆ ಬಟ್ರ ಮನೆಗೆ ಬಾರದೆ ಇರಿಕಿಲ್ಲೆ, ಬಟ್ರ ಮನೆಗೆ ಧಾರೆಗೆ ಕರಿಕೆ ಸೂರಪ್ಪ ಹೋಗುಟ್ಟಲೆ ? ಅವನ ಕೇಳಿರೆ ಗೊತ್ತಾದೆ.

**ಮಂಜ** : ಕೇಳಿ – ಕೇಳಿ ಎಲ್ಲುಟ್ಟಂವ.

**ಕುಶಲ** : ಕೇಳಿ ಬನ್ನೆ (ಹೋಗಿ ಬಂದು) ಮಾಸ್ಟ್ರ ಭಟ್ರ ಮನೆಲಿ ಒಳೊ ಗಡ–ಭಟ್ರ್ ನೇವಸಲಿ ಗುಡಿ ಹಾಕಿ ಮನ್‌ಗಿದ್ದೊ ಗಡ. ಮಾಸ್ಟ್ರ ಮತ್ತೆ ಹಾರ್ತಿ ದೀಪ ಉರ್ಸಿ ಕುದ್ದಿದ್ದೊ ಗಡ.

**ಮಂಜ** : ಬನ್ನೆಂತ ಹೇಳ್ತ್‌ಲ್ಲೆ ಮಾಸ್ಟ್ರ ?

**ಕುಶಲ** : ಹೇಳ್ಯೊಳೊ ಗಡ – ಭಟ್ರ್‌ಗೆ ಸ್ವಲ್ಪ ಜೋರು ಎಳ್ದದೆ. ಇಲ್ಲಿ ಯಾರೂ ಇಲ್ಲೆ, ಧಾರೆ ಮುಗಿಯಲಿ – ಚೆಂಡೆ ಪೆಟ್ಟ್ ಕೇಳ್ಕನ ನಾ ಬನ್ನೆಂತ.

**ನಂಜ** : ಭಟ್ರಿಗೆ ಜೋರುಟ್ಟು– ಮಾಸ್ಟ್ರ ಬಾರದ್ದರೆ ಪದಕ್ಕೆ ಎಂತ ಮಾಡ್ತು.

**ಮಂಜ** : ಮಾಸ್ಟ್ರಿಲ್ಲೆಂತ ನಿಲ್ಸಿಕಿಲ್ಲೆ. ಮದ್ದಳೆ ಆಚಾರಿ ಪದಕ್ಕೆ ಕೂರಲಿ.

ನಂಜ : ಮದ್ದಳೆಗೆ ?

**ಮಂಜ** : ನೋಡುಮೊ, ದಿಬ್ಬಣದಲಿ ಬಂದವ್ರು ಯಾರಾರ್ ಈ ಹುಚ್ಚಿನವಿರುವ್ರೊ.

ನಂಜ : ನೋಡ್ತೆ – ವಿಚಾರಿಸಿನೆ *(ಹೋಗುವನು)*

**ಮಂಜ** : ಯಾಕೆ ತಡಮಾಡ್‌ದು, **ಹೋಗಿ ಹೇಳಮ್ಮ ಹೊತ್ತು**... ನಡೀರ್ಸ್ ಕಳ್ಸ್. ಕುಕ್ಕಪ್ಪ ಶ್ರುತಿ ಹಿಡಿಯಲಿ – ಸೂರಪ್ಪ ಚೆಂಡೆ ಹೊಡೆಯಲಿ. ಸದ್ಯ ನಾ ಮದ್ದಳೆ ಬಡ್ದನೆ *(ಶ್ರುತಿ ಜಾಗಟೆ ಚೆಂಡೆ ಮದ್ದಳೆ ಧ್ವನಿ ಆರಂಭವಾಗುತ್ತಿದ್ದಂತೆ ಚಪ್ಪರದಡಿಯ ಬೆಳಕು ಕಡಿಮೆಯಾಗುತ್ತ ಕತ್ತಲು ಆವರಿಸುವುದು)*

# ಬೊಳ್ಳಾಕನ ಮುಗ್ತ್

9

*(ಬಯಲು ದಾರಿ ಮುಂಜಾನೆಯ ಬೆಳಕು ಹರಿಯುತ್ತಿದ್ದಂತೆ ಕಣ್ಣುಜ್ಜಿಕೊಳ್ಳುತ್ತ ನಂಜನ ಪ್ರವೇಶ)*

**ನಂಜ** : **ನೋಡಿ ನಿರ್ಮಲ ಜಲ ಸಮೀಪದಿ । ಮಾಡಿಕೊಂಡರು ಪರ್ಣ ಶಾಲೆಯ** ... ಮುಕ್ತ್. ಅಂತ್ೕ, ಬೊಳ್ಳಾಕನ ಮುಗ್ತ್. ಮೊದ್ವೆ ಜತೆ ಒಂದು ತಾಳಮದ್ದೆನೂ ಮುಗ್ತ್. ಹಿಂಬೊತ್ತಿಗೆ ಆವ ಮೊದ್ವೆ ನಡೀರ್‍ಳ್ಗೆ ಮುಗ್ತ್. ಬೊಳ್ಳಾಕನ ಪಂಚವಟಿ ಪ್ರಸಂಗ ಮುಗ್ದದಲ್ಲ ಮುಗ್ಸಿದ್. ಆಚಾರಿ ಪದ ಹಾರ್ಸಿ ಮುಗ್ಸಿತ್.

**ಕುಶಲ** : *(ನಂಜನ ಬೆನ್ನಿಗೆ ಪ್ರವೇಶಿಸಿತ್ತಾ)* ಮೊದುವೆಗೆ ಬಂದವ್‍ಕ್ಕೇ ಸರಿ ಊಟ ಬುಡಿ ಕುಡೆಕೆ ನೀರುಟ್ಟೊ? ಮೊದೊಳಿಗೆನ ಅಜ್ಜಿಗೆ ಕುಲೆ ಹಿಡ್ದ್ ನೀರ್ ಕೇಳ್ದೆ, ನೀರುಟ್ಟೊ ? ಮತ್ತೆ ಕುಪ್ಪಿ ಬಗ್ಗಿಸಿ ಕೊಡ್ಕನ ಕುಲೆ ಬುಟ್ಟು ಮನೆಗಿದ್ದ್ ಗಡ.

**ನಂಜ** : ಅದ್ ಕೊಲೆ ಅಲ್ಲಯಾ, ಗೂಡೆನ ಅಯ್ಯೆ ಮನೇಂದ ಅಜ್ಜಿ ಒಟ್ಟಿಗೇ ಬಂದ ಕಲ್ಲುರ್ಟಿ ದೆವ್ವ ಗಡ.

**ಕುಕ್ಕ** : *(ಪ್ರವೇಶಿಸುತ್ತ)* ಆ ಗಂಗಯ್ಯನ ಗಡಿಬಿಡಿಲಿ ಅಡಿಗೆ ಚಪ್ಪರಕ್ಕೆ ಕಿಚ್ಚ್ ಹಿಡಿಯದ್ದ್ ಮಣ್ಯ, ಗೈಪಿಗೆ ಹಾಕಿದ ಒಗ್ಗರಣೆ.

**ಕುಶಲ** : ನಾ ಹೇಳ್ಯೊಳೆ ಗಂಗಯಂಗೆ ಅಡಿಗೆಗೆ ಮುಂದೆನೇ ಕೊಟ್ಟರೆ ಆಕಿಲ್ಲೆಂತ – ಕೇಳುವ ಮುಂದೆನೆ ಕೊಟ್ಟೊಳೊ. ಗೈಪಿಗೆಂತ ಹಾಕಿದ ಒಗ್ರಣೆ ಪಾಯ್ಸಕ್ಕೆ.

**ಶೂರಪ್ಪ** : *(ಪ್ರವೇಶಿಸುತ್ತ)* ಮೊದ್ವೆಲಿ ಮತ್ತೊಂದು ಕತೆ ಆಗುಟ್ಟು ಗೊತ್ತುಟ್ಟೊ– ಗುಟ್ಟಲಿ ಮಾತಾಡ್ತಿದ್ದೊ.

**ಕುಶಲ** : ಎಂತಯ ಶೂರಪ್ಪಣ್ಣ ?

**ಶೂರಪ್ಪ** : ಮೋಂಟಿ ಕುತ್ಗೆಗೆ ಕಟ್ಟಿಕೆ ಮೋಂಟನ ಕೈಲಿ ಕೊಟ್ಟ ತಾಳಿ ಮೋಂಟನ ಕೈಲೆ ಬಾಕಿ. ಮೊದ್ವೆ ಊಟ ಎಲ್ಲ ಆದ ಮೇಲೆ ಮೆಲ್ಲ ಜೋಬಿಂದ ತೆಗ್ದ್ ಮೋಂಟ ಕೇಳ್ತ್ ಗಡ ಇದರ ಕಟ್ಟುದು ಯಾಗಂತ?

**ಎಲ್ಲರೂ** : ಮತ್ತೆ, ಮತ್ತೆ ಏನಾತ್ ?

**ಶೂರಪ್ಪ** : ಕೇಳಿ – ಮೋಂಟಂಗೆ ಗುಟ್ಟಿಲಿ ಹೀಂಗೆ ಹೇಳಿಕೊಟ್ಟೊ. ಇಲ್ಲಿ ತಾಳಮದ್ದೆ ನಡೆಕನ ಅಲ್ಲಿ ಹೆಮ್ಮಕ್ಕ ಒಟ್ಟಿಗೆ ನಿದ್ರೆಲಿ ಮನ್‌ಗಿದ ಗೂಡೆ ಕುತ್ತಿಗೆಗೆ ಹೋಗಿ ಕಟ್ಟ್‌ಂತ್. ಮೋಂಟ ಹಾಂಗೆ ಮಾಡ್ತ್ ಕತ್ತಲೆಲ್ಲೆ ಹೋಗಿ ತಾಳಿ ಕಟ್ಟಿ ಬಾತ್. ಬೊಳ್ಪಾತ್ ಎಲ್ಲಾ ಎದ್ದೊ. ಎಲ್ಲಕ್ಕಿಂತ ಮುಂದೆ ರಾತ್ರೆ ಕುಡ್ದ್ ಮನ್ಗಿದ ಗಂಗಜ್ಜಿ ಎದ್ದ್ ವೀಳ್ಯ ತಿಂಬಕೆ ಅಡಿಕೆ ಹೋಳು ಗುದ್ದಿದೆ. ಅಜ್ಜಿನ ಕುತ್ತಿಗೆಲಿ ಪಳಪಳಂತ ಹೊಸ ತಾಳಿ ಹೊಳ್ದದೆ – ಎಲ್ಲ ನೋಡ್ದೊ ಮೊದೊಳಿಗೆ ಮೋಂಟಿ ಕುತ್ತಿಗೆಲಿ ತಾಳಿ ಇಲ್ಲೆ. ಎಲ್ಲವ್ಕೂ ಆಶ್ಚರ್ಯ.

**ಎಲ್ಲರೂ** : ಥೇ ! ಥೇ ! ಇದೆಂಥ ಕತೆ, ಕಡೆಗೆ ಏನ್ಮಾಡ್‌ದೊ ?

**ಶೂರಪ್ಪ** : ಗೂಡೆ ಕುತ್ಗೆಂದ ಗಂಗಜ್ಜಿ ಕುತ್ಗೆಗೆ ತಾಳಿ ಪಗರ್ಸಿದ್ ಕಲ್ಲುರ್ಟಿ ದೆವ್ವ ಗಡ. ಗೂಡೆನ ದಾರೆ ಎರ್ದ್ ದೆವ್ವಕ್ಕೆ ಕೊಟ್ನೆಂತ ಸೊಂಪಜ್ಜ ನಿಂಗಟ್ ಮಾಡಿ ಅದೇ ಚಪ್ಪರಲಿ ತಾಳೆಮದ್ದೆ ಮಾಡ್ಸಿತಲೆ. ಆ ತಪ್ಪಿಗೆ ಕಲ್ಲುರ್ಟಿಗೆ ಮತ್ತೆ ಕೋಲ ಕೊಟ್ನೆಂತ ಹರ್ಕೆ ಹೇಳಿ ಅಜ್ಜಿ ಕುತ್ತಿಗೆ ತಾಳಿನ ಗೂಡೆ ಕುತ್ಗೆಗೆ ಕಟ್ಯಾತ್.

**ನಂಜ** : ಆಗಲಿ ರಾತ್ರೆ ದಾರೆ ಎರ್ದ್ ಬೊಳ್ಪಿಗೆ ತಾಳಿ ಕಟ್ಯಾತ್. ಅಂತ್‌ೕ ಬೊಳ್ಪಾಕನ ಎಲ್ಲ ಮುಗ್ತ್. ಆದರೆ ನನ್ನ ಗುರು ಮಂಜುಬಾವ ಇನ್ನೀ ಯಾಕೆ ಬಾತ್‌ಲ್ಲೆ, ಎಲ್ಲ ಮುಗ್ತಲೆ.

**ಸೀನಪ್ಪ** : *(ಪ್ರವೇಶಿಸುತ್ತ)* ಎಲ್ಲ ಮುಗ್ತಿಲ್ಲೆ ಇನ್ನೀ ಓಸಿ ಉಳ್ದುಟ್ಟು ಹೇಳ್ನೆ.

**ಶೂರಪ್ಪ** : ಏನಿಯಾ ಆ ಗಂಗಯ್ಯನ ಕರೆಂಟಿದ ಪಾಯ್ಸ ಉಳ್ದುಟ್ಟೊ ಹೇಂಗೆ ?

**ಸೀನಪ್ಪ** : ಪಾಯ್ಸ ಅಲ್ಲಯ... ಆ ಭಟ್ರ ಹಾರ್ತಿ

**ಎಲ್ಲರೂ** : ಏನ್ ? ಭಟ್ರ ಹಾರ್ತಿ ! ಏನಾತ್ ?

**ಸೀನಪ್ಪ** : ಬೊಳ್ಪಾಕನ ಮನೇಲಿಲ್ಲೆ ಗಡ !

**ಎಲ್ಲರೂ** : ಇಲ್ಲೆ ಗಡ ! ಯಾರ್ ಹೇಳ್ದ್ ?

**ಸೀನಪ್ಪ** : ಭಟ್ರೇ ನೇವಸಂದ ಗೂರು ಎಳ್‌ಕಂಡ್, ಈಗ ಮೊದ್ವೆ ಮನೆಗೆ ಬಂದ್ ಕೇಳ್ದೊ, ತಿಮ್ಮಪ್ಪ ಮಾಸ್ಟ್ರ ಒಳೋಂತ. ಮಂಜಣ್ಣ ಹೇಳ್ತ್ ಇಲ್ಲೆ ಅವು ಬಾತ್‌ಲ್ಲೆಂತ. ಭಟ್ರ್ ಹ್ವಾಂತ ಜನ್ಯಾರ ತಿರ್ಗಿಕಂಡ್ ಹೋದೊ. ಅಲ್ಲಿಂದಳೇ ಬಂದವೆ ಮಂಜಣ್ಣನ ಬೇಕಾರೆ ಕೇಳಿ.

**ಮಂಜ** : (ಪದದೊಂದಿಗೆ ಪ್ರವೇಶಿಸುತ್ತ) **ಎಲವೊ ಸೂತನ ಮಗನೇ । ನೀ । ಕಲಹದೊಳು ಸಹಸಿಗನೆ.** ನಂಜಾ ! ಮಾಸ್ಟ್ರ ಜತೆ ನಮ್ಮ ಹಾರ್ತಿ ಹಾರ್ತ್. ನಮ್ಮ ಆಟಕ್ಕೆ ಇನ್ನ್ ಪದಕ್ಕೆ ಜನ ಇಲ್ಲೆ. ಇಲ್ಲೆಂತ ಸುಮ್ಮನೆ ಕುದ್ರಿಕಾಗದ್. ಮೇಳ ನಿಲ್ಸಿಕಿಲ್ಲೆ. ನಾ ನೀ ಕೂಡಿ ಮೋಂಟಿ ಗೂಡೆನ ಪದಕ್ಕೆ ತಯಾರಿ ಮಾಡೊಮ. ಅದ್ಕೆ ಒಳ್ಳೆ ಸೂರ ಉಟ್ಟು. ಪೆಟ್ಟಿಗೆ ಹೊರಿಕೆ ಮೋಂಟ ಉಟ್ಟು. ನಡ್ಸಿಕೆ ನಾ ಒಳೆ. ನಮ್ಮ

ಕೇಪಜ್ಜ ಕಟ್ಟಿದ ಬೊಳ್ಳಾಜೆ ಮೇಳನ ನಿಲ್ಸಿಕಾಗದ್. ನೀವೆಲ್ಲ ಜತೆಲಿರ್ಕನ ಎಂತಕೆ ಹೆದ್ರುದು. ನಡ್ಸುದೆ. ಏನ್ ಹೇಳ್ರ. **ಬನ್ನಿರೈ ಸಂಸಾರ ಶರಧಿಯನು ದಾಂಟುವರು ಬನ್ನಿರೈ**, ನಂಜಾ ! ಹಾರಲಿ ರಥ *(ಗತ್ತಿನಿಂದ ಮುಂದಾಗುತ್ತಾ)* **ಎಲ್ಲಿಗೆ ಒಯ್ವೆಯಾ ಸೀತೆಯ । ಬಿಡು । ಕಳ್ಳ ರಕ್ಕಸ ಜಗನ್ಮಾತೆಯ** *(ಮಂಜನ ಹಿಂದೆ ಉಳಿದೆಲ್ಲರು ಅವನನ್ನು ಅನುಕರಿಸುತ್ತ ಮುಂದಾಗುವರು)*



ಕಳೆದ 1956ರಲ್ಲಿ ರಚನೆಗೊಂಡಿರುವ ಬೊಳ್ಪಾಕನ ಮುಗ್ತ್ ನಗೆ ನಾಟಕ ಓದುವುದಕ್ಕಿಂತಲೂ ಹೆಚ್ಚಾಗಿ ಆಡುವ ರಂಗಕೃತಿ. ಇದರಲ್ಲಿ ಸಾಮಾಜಿಕ ಸಮುದಾಯದ ಸಜೀವ ಚಿತ್ರಣವಿದೆ. ಗ್ರಾಮೀಣ ಆಡುಮಾತಿನ ಸೊಗಡಿದೆ. ಇಲ್ಲಿ ಆಟ ಕೂಟ ಬೇಟೆ ಕಂಬಳ ಅಂಕ ಆಯನಗಳಿವೆ. ಗರತಿ ಗಯ್ಯಾಳಿಗಳ ಹೊಂಚು ಮಿಂಚುಗಳಿವೆ. ಭೂತ ಪ್ರೇತಗಳ ಕಟ್ಟೆ ಪುರಾಣಗಳಿವೆ. ಯಕ್ಷಗಾನ ಮೇಳದ ಗೀಳು ಗೋಳುಗಳಿವೆ. ತಮ್ಮ ನಡೆನುಡಿಗಳೆಡೆ ಎತ್ತಿ ಆಡುವ ಯಕ್ಷಗಾನ ಗುಂಗಿನ ಖಯಾಲಿಗಳ ಗತ್ತಿನ ಪದಗಳಿವೆ.

• ಲೇಖಕರ ನುಡಿಯಿಂದ



ಬೊಳ್ಪಾಕನ ಮುಗ್ತ್

ಟಿ.ಜಿ. ಮುಡೂರು